CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮೇ ೨೭, ೨೦೦೪ (ಜೇಷ್ಠ ೬, ಶಕ ವರ್ಷ ೧೯೨೬) | ಸಂಚಿಕೆ ೨೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ದೊಡ್ಡಬಳ್ಳಾಪುರ ಟೌನ್ ಪವರ್ ಲೂಂ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ: 88:03-04, ದಿನಾಂಕ: 15.04.2004.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಎಲ್‌ಕ್ಯೂಡಿ:29:84-85, ದಿ: 24.4.1985.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಬಿ:914:57-58, ದಿನಾಂಕ: 15.1.1967 ರಲ್ಲಿ ನೋಂದಣಿಯಾದ ದೊಡ್ಡಬಳ್ಳಾಪುರ ಟೌನ್ ಪವರ್ ಲೂಂ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ನೋಂದಣಿಯಾದ ಸಂಘವು ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳದೆ ಹಾಗೂ ಸಹಕಾರ ಸಂಘಗಳ ಕಾಯ್ದೆ ಕಾನೂನು ಪ್ರಕಾರ ನಿಯತಕಾಲದಲ್ಲಿ ವಾರ್ಷಿಕ ಮಹಾಸಭೆಯಾಗಲೀ, ಚುನಾವಣೆಯಾಗಲೀ ನಡೆಸದೆ ಕಾಯ್ದೆ ಕಾನೂನನ್ನು ಉಲ್ಲಂಘಿಸಿದ ಕಾರಣ ಸಂಘವನ್ನು ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಈ ಸಂಘದ ಲೆಕ್ಕಪರಿಶೋಧನೆಯಾದ ಬಗ್ಗೆ ವರದಿಗಳು ಲಭ್ಯವಿಲ್ಲವೆಂದು ಸರ್ಕಾರದ ಷೇರು ಹಾಗೂ ಸಾಲಗಳನ್ನು ಹೊಂದಿರುವ ಬಗ್ಗೆ ಕಛೇರಿಯಲ್ಲಿ ಯಾವುದೇ ದಾಖಲಾತಿಗಳು ಲಭ್ಯವಿಲ್ಲವೆಂದು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ಸದಸ್ಯರ ಮತ್ತು ಸಾರ್ವಜನಿಕರ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ 15 ದಿನದೊಳಗಾಗಿ ಸಲ್ಲಿಸಲು ದಿನಾಂಕ: 28.03.2004 ರಂದು **"ಹಾಯ್ ದೊಡ್ಡಬಳ್ಳಾಪುರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿ, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:29:2004-05, ದಿನಾಂಕ: 29ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ದೊಡ್ಡಬಳ್ಳಾಪುರ ಟೌನ್ ಪವರ್ ಲೂಂ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಬಿ-914:57-58, ದಿನಾಂಕ: 15.1.1967ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29.04.2004 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 716

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಲಕ್ಕೊಂಡಹಳ್ಳಿ ಎಸ್.ಸಿ/ಎಸ್.ಟಿ. ವಿವಿಧೋದ್ದೇಶ ಕೈಗಾರಿಕಾ ಸಹಕಾರ ಸಂಘ ನಿ., ಹೊಸಕೋಟೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ: 89:03-04, ದಿನಾಂಕ: 15.04.2004.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಎಲ್‌ಕ್ಯೂಡಿ:60:96-97, ದಿ: 29.7.1998.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್/ನೋಂದಣಿ/20006/92-93, ದಿನಾಂಕ: 22.2.2003 ರಲ್ಲಿ ನೋಂದಣಿಯಾದ ಲಕ್ಕೊಂಡಹಳ್ಳಿ ಎಸ್.ಸಿ/ಎಸ್.ಟಿ. ವಿವಿಧೋದ್ದೇಶ ಕೈಗಾರಿಕಾ ಸಹಕಾರ ಸಂಘ ನಿ., ಹೊಸಕೋಟೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು 1992-93ನೇ ಸಾಲಿನಿಂದ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದು ಸದಸ್ಯರುಗಳಿಗಾಗಲೀ, ಆಡಳಿತ ಮಂಡಳಿಗಾಗಲೀ ಸಂಘವನ್ನು ಪುನರಾರಂಭಿಸಲು ಆಸಕ್ತಿ ಇಲ್ಲವಾದ್ದರಿಂದ ಉಲ್ಲೇಖ (2)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು ಸಂಘದಲ್ಲಿ 2001-2002ನೇ ಸಾಲಿನವರೆಗೂ ಆಡಿಟ್ ಆಗಿದ್ದು ಅದರ ಆಸ್ತಿ-ಜವಾಬ್ದಾರಿ ತಃಖ್ತೆಯಲ್ಲಿ ತಿಳಿಸಿರುವಂತೆ ಬಿ.ಡಿ.ಸಿ.ಸಿ. ಬ್ಯಾಂಕ್ ಹೊಸಕೋಟೆ ಶಾಖೆಯಲ್ಲಿ ರೂ.2,647-52 ಗಳು ಮಾತ್ರ ಇದ್ದು, ಸದಸ್ಯರಿಗೆ ಪಾವತಿಸಬೇಕಾಗಿರುವ ಷೇರು ಹಣ ರೂ.3,250-00 ಗಳ ಬಗ್ಗೆ ಪಾವತಿಸಲು ದಾಖಲಾತಿಗಳು ಲಭ್ಯವಿಲ್ಲದೇ ಇರುವುದರಿಂದ ಪಾವತಿಸಲು ಸಾಧ್ಯವಾಗದೇ ಇರುವುದರಿಂದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರ ವೈಯಕ್ತಿಕ ಖಾತೆ ಸಂಖ್ಯೆ:321/12ಎ ಬಿ.ಡಿ.ಸಿ.ಸಿ. ಬ್ಯಾಂಕ್ ಬೆಂಗಳೂರು ಇಲ್ಲಿಗೆ ದಿನಾಂಕ: 27.3.2004 ರಂದು ವರ್ಗಾವಣೆ ಮಾಡಿದ್ದು ಅನಂತರ ಆಸ್ತಿ-ಜವಾಬ್ದಾರಿ ತಃಖ್ತೆಯಲ್ಲಿ ವಿಲೇವಾರಿ ಮಾಡಲು ಬಾಕಿ ಇರುವುದಿಲ್ಲ ಹಾಗೂ ದಿನಾಂಕ: 27.03.2004 ರಂದು ಸಮಾಪನಾಧಿಕಾರಿಗಳು ಸಭೆ ನಡೆಸಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ತೀರ್ಮಾನಿಸಿರುತ್ತಾರೆ.

### ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:60:2004-05, ದಿನಾಂಕ: 30ನೇ ಏಪ್ರಿಲ್ 2004

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಲಕ್ಕೊಂಡಹಳ್ಳಿ ಎಸ್.ಸಿ/ಎಸ್.ಟಿ. ವಿವಿಧೋದ್ದೇಶ ಕೈಗಾರಿಕಾ ಸಹಕಾರ ಸಂಘ ನಿ., ಹೊಸಕೋಟೆ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್/ನೋಂದಣಿ/20006/92-93, ದಿನಾಂಕ: 22.2.2003ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 30.04.2004 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 717

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು-52

**ವಿಷಯ:** ಸಮಾಪನೆಯಲ್ಲಿರುವ ಕೋರಮಂಗಲ ಎಸ್.ಸಿ./ಎಸ್.ಟಿ. ರೇಷ್ಮೆ ಬೆಳೆಗಾರರ ಕೊಳವೆಬಾವಿ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ: 90:03-04, ದಿನಾಂಕ: 15.04.2004.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:64:00-01, ದಿ: 21.11.2001.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್-47:77:ಆರ್‌ಸಿಎಸ್:11584:84-85, ದಿನಾಂಕ: 20.09.1985 ರಲ್ಲಿ ನೋಂದಣಿಯಾದ ದೇವನಹಳ್ಳಿ ತಾಲ್ಲೂಕು, ಕೋರಮಂಗಲ ಎಸ್.ಸಿ./ಎಸ್.ಟಿ. ರೇಷ್ಮೆ ಬೆಳೆಗಾರರ ಕೊಳವೆಬಾವಿ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು ಪ್ರಾರಂಭದಿಂದ ಸ್ಥಗಿತವಾಗಿದ್ದು 1993-94ನೇ ಸಾಲಿನಿಂದ ಸಂಘದ ಲೆಕ್ಕಪರಿಶೋಧನವಾಗಿರುವುದಿಲ್ಲ. ಸದರಿ ಸಂಘವು ಯಾವ ಉದ್ದೇಶಗಳಿಗೆ ನೋಂದಣಿಯಾಗಿತ್ತೋ ಆ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲವಾಗಿರುತ್ತದೆ ಹಾಗೂ 1986 ರಿಂದಲೂ ಸಂಘದಲ್ಲಿ ಮಾಸಿಕ ಸಭೆಯನ್ನಾಗಲೀ, ವಾರ್ಷಿಕ ಮಹಾಸಭೆಯನ್ನು ನಡೆಸಲು ವಿಫಲವಾಗಿದ್ದರಿಂದ ಉಲ್ಲೇಖ (2)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು.

ಸಂಘದ 1989-90ನೇ ಸಾಲಿನ ಆಸ್ತಿ-ಜವಾಬ್ದಾರಿ ತಃಖ್ತೆಯಂತೆ ಇದ್ದ ಆಸ್ತಿ ಜವಾಬ್ದಾರಿಗಳನ್ನು ಲಗತ್ತಿಸಿರುವ ಜಮಾ ಖರ್ಚು ತಃಖ್ತೆಯಂತೆ ವಿಲೇವಾರಿ ಮಾಡಿದ್ದು ಉಳಿದಂತೆ ವಿಲೇವಾರಿ ಮಾಡಲು ಇನ್ನು ಯಾವುದೇ ಆಸ್ತಿ ಜವಾಬ್ದಾರಿಗಳು ಇರುವುದಿಲ್ಲವೆಂದು

ಹಾಗೂ ಸರ್ಕಾರಕ್ಕೆ ಮರುಪಾವತಿಸಲು ಷೇರು ಮತ್ತು ಸರ್ಕಾರದ ಸಾಲ ಯಾವುದೇ ಬಾಕಿ ಇರುವುದಿಲ್ಲವೆಂದು ದಿನಾಂಕ: 26.3.2004 ರಂದು ಸಮಾಪನಾಧಿಕಾರಿಯವರು ಸಭೆ ನಡೆಸಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ತೀರ್ಮಾನಿಸಿರುತ್ತಾರೆ.

ಆದ್ದರಿಂದ ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:64:2003-04, ದಿನಾಂಕ: 30ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಕೋರಮಂಗಲ ಎಸ್.ಸಿ./ಎಸ್.ಟಿ. ರೇಷ್ಮೆ ಬೆಳೆಗಾರರ ಕೊಳವೆಬಾವಿ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್-47:77:ಆರ್‌ಸಿಎಸ್:11584:84-85, ದಿನಾಂಕ: 20.09.1985ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 30.04.2004 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 718 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡವಳಿಕೆಗಳು**

**ವಿಷಯ:** ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀ ಮೆ: ದೊಗ್ಗಳ್ಳಿ ಮಲ್ಲಪ್ಪ ಮತ್ತು ಮಕ್ಕಳು, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ರಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: 105/99-2000, ದಿನಾಂಕ: 20.07.1999.
2) ಅಮಲ್ಜಾರಿ ಪ್ರಕರಣ ಸಂಖ್ಯೆ: 751/99-2000.
3) ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ: ಮಾಅ/ಡಿವಿಜಿ/ಮಾಪ್ರಪ/2/2003-04, ದಿನಾಂಕ: 24.02.2004.
4) ಬ್ಯಾಂಕಿನ ಆಡಳಿತ ಮಂಡಳಿ ಸಭೆ ತೀರ್ಮಾನ ದಿನಾಂಕ: 23.01.2004.

**ಪ್ರಸ್ತಾವನೆ:**

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಬ್ಯಾಂಕಿನ ಸಾಲಗಾರರಾದ ಶ್ರೀ ಮೆ: ದೊಗ್ಗಳ್ಳಿ ಮಲ್ಲಪ್ಪ ಮತ್ತು ಮಕ್ಕಳು ಇದರ ಪಾಲುದಾರರಾದ ಶ್ರೀ ಡಿ. ದಯಾನಂದ ಮತ್ತು ಶ್ರೀ ಡಿ. ಚಂದ್ರಶೇಖರ, ದಾವಣಗೆರೆ ಇವರು ದಾವಣಗೆರೆ ತಾಲ್ಲೂಕು, ದಾವಣಗೆರೆ ಸಿಟಿ, ಆರ್.ಎಂ.ಸಿ. ಯಾರ್ಡ್‌ನ ಸೈಟ್ ನಂ.187, ಡೋರ್ ನಂ.1210, 6ನೇ ಡಿವಿಜನ್, 'ಎ' ಬ್ಲಾಕ್‌ನಲ್ಲಿರುವ 45X120 ಅಡಿಯ ನಿವೇಶನವನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಬ್ಯಾಂಕಿನವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: 105/99-2000, ದಿನಾಂಕ: 20.07.1999 ರಂದು ಒಟ್ಟು ರೂ.12,11,440-43 ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ:751/99-2000ನ್ನು ಕಲಂ 101 ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮ ಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ: 10.02.2004 ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಸದರಿಯವರ ಆಸ್ತಿಯು ಯಾವ ಬಿಡ್ಡುದಾರರು ಭಾಗವಹಿಸದೇ ಇರುವ ಕಾರಣ ಹರಾಜಾಗದೇ ಬ್ಯಾಂಕಿನ ಸಾಲವು ವಸೂಲಾಗದೇ ಇದ್ದು ತೀರ್ಪು ಬಾಕಿದಾರರಿಗೆ ಹಾನಿಯಾಗುತ್ತಿರುವುದನ್ನು ಪರಿಗಣಿಸಿ, ಸದರಿಯವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರುಕಟ್ಟೆಯ ಮೌಲ್ಯಕ್ಕೆ ವರ್ಗಾವಣೆ ಮಾಡಿಕೊಳ್ಳಲು ತೀರ್ಮಾನಿಸಿದೆ. ಈ ಸ್ಥಿರಾಸ್ತಿಯ ಮಾರುಕಟ್ಟೆಯ ಬೆಲೆಯು ರೂ.11 ಲಕ್ಷ (ರೂ.ಹನ್ನೊಂದು ಲಕ್ಷ ಮಾತ್ರ) ಆಗಿರುತ್ತದೆ ಎಂದು ಅಂದಾಜು ಮಾಡಲಾಗಿರುತ್ತದೆ. ಮಾರಾಟಾಧಿಕಾರಿಯವರು ಸಹ ಈ ಬಗ್ಗೆ ಹರಾಜು ನಡವಳಿಕೆಯಲ್ಲಿ ದಾಖಲಿಸಿ ಮಾರುಕಟ್ಟೆ ಮೌಲ್ಯಕ್ಕೆ ಸದರಿ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾಯಿಸಿ ಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ ಈ ಬಗ್ಗೆ ಕಾಯ್ದೆಯನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಪಾಲುಗೊಳ್ಳದೇ ಇರುವ ಪ್ರಯುಕ್ತ ಹಾಗೂ ಬ್ಯಾಂಕು ಈ ಸ್ಥಿರಾಸ್ತಿಯನ್ನು ಮಾರುಕಟ್ಟೆ ಬೆಲೆಗೆ ಸಾಲದ ತೀರುವಳಿ ಕುರಿತಂತೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಮಾರಾಟಾಧಿಕಾರಿಯವರ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ರಡಿಯಲ್ಲಿ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ: ಎಆರ್ 31/ಎಬಿಎನ್/ದಾವಾ/6/2004-05, ದಿನಾಂಕ: 12ನೇ ಮೇ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/509/ಸಿಎಲ್ಎಂ/96, ದಿನಾಂಕ: 21.03.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ದಾವಾ ಸಂಖ್ಯೆ: 105/99-2000, ದಿನಾಂಕ: 20.07.1999 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ: 751/99-2000ರ ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀ ಮೆ: ದೊಗ್ಗಳ್ಳಿ ಮಲ್ಲಪ್ಪ ಮತ್ತು ಮಕ್ಕಳು ಇವರ ಪರವಾಗಿ ಶ್ರೀ ಡಿ. ದಯಾನಂದ ಶ್ರೀ ಡಿ. ಚಂದ್ರಶೇಖರ, ದಾವಣಗೆರೆ ಇವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ ಆರ್.ಎಂ.ಸಿ. ಯಾರ್ಡ್‌ನ ಸೈಟು ನಂ.187, ಡೋರ್ ನಂ.1210, 6ನೇ ಡಿವಿಜನ್, 'ಎ' ಬ್ಲಾಕ್‌ನಲ್ಲಿರುವ 45X120 ಅಡಿಯ ನಿವೇಶನವನ್ನು ಅದರ ಮಾರುಕಟ್ಟೆ ಬೆಲೆಯಾಗಿರುವ ರೂ.11 ಲಕ್ಷಗಳ (ರೂ.11 ಲಕ್ಷ) ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಬ್ಯಾಂಕಿಗೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸ್ವತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ-8 ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿರುವ ಮಾರುಕಟ್ಟೆ ಬೆಲೆಗೆ ಉಲ್ಲೇಖದ ಸ್ಥಿರಾಸ್ತಿಯನ್ನು ತನ್ನ ಹೆಸರಿಗೆ ಬ್ಯಾಂಕು ವರ್ಗಾಯಿಸಿಕೊಂಡು ತೀರ್ಪು ಬಾಕಿದಾರರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸ್ವತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ-ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 12.5.2004 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯ)**

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಪ್ರಧಾನ ವ್ಯವಸ್ಥಾಪಕರು, ಶ್ರೀ ಮೆ: ದೊಗ್ಗಳ್ಳಿ ಮಲ್ಲಪ್ಪ ಮತ್ತು ಮಕ್ಕಳು ಇವರ ಪರವಾಗಿ ಶ್ರೀ ಡಿ. ದಯಾನಂದ ಹಾಗೂ ಡಿ. ಚಂದ್ರಶೇಖರ್, ದಾವಣಗೆರೆ ಇವರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿಯಲ್ಲಿ ದಾವಾ ಸಂಖ್ಯೆ: 105/99-2000 ರಲ್ಲಿ ಸದರಿಯವರಿಂದ ಬ್ಯಾಂಕಿಗೆ ಆಧಾರ ಮಾಡಿರುವ ಈ ಸರ್ಟಿಫಿಕೇಟಿನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡನ್ನು ಪಡೆದಿದ್ದು ಇದನ್ನು ಜಾರಿಗೊಳಿಸಲು ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 12.3.2001, 12.10.2001, 16.3.2002, 28.8.2002, 6.3.2003., 28.7.2003, 3.11.2003, 20.12.2003 ಹಾಗೂ 10.2.2004 ರಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: 105/99-2000 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಬ್ಯಾಂಕಿಗೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಬ್ಯಾಂಕು ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ಮಾರುಕಟ್ಟೆ ದರವನ್ನು ಪರಿಗಣಿಸಿ ರೂ.11 ಲಕ್ಷ (ರೂ.ಹನ್ನೊಂದು ಲಕ್ಷ ಮಾತ್ರ) ಮೊತ್ತಕ್ಕೆ ಬ್ಯಾಂಕಿನ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿ ವಿವರ | ಅಳತೆ | ಸಾಲ ತೆಗೆದು ಕೊಂಡಿರುವ ಸಾಮ್ಯ ಹಕ್ಕುಬಾಧ್ಯತೆ | ಮಾರುಕಟ್ಟೆ ಮೌಲ್ಯ | ಸ್ವತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ದಾವಣಗೆರೆ | ದಾವಣಗೆರೆ ಸಿಟಿ, ಆರ್.ಎಂ.ಸಿ. ಯಾರ್ಡ್‌ನ 6ನೇ ಡಿವಿಜನ್, 'ಎ' ಬ್ಲಾಕ್‌ನಲ್ಲಿರುವ ಸೈಟ್ ನಂ.187, ಡೋರ್ ನಂ.1210 | 45X120 ಅಡಿ | ಸ್ವಂತ ಸ್ವಾಧೀನ | ರೂ.11 ಲಕ್ಷ | ಅಸಲು, ಬಡ್ಡಿ ಮತ್ತು ಇತರೆ ಖರ್ಚು ಸೇರಿ ಒಟ್ಟು ರೂ.15,14,406-43 (ದಿನಾಂಕ: 10.2.2004ಕ್ಕೆ ಇದ್ದಂತೆ) |

ಮೇಲ್ಕಂಡ ಸ್ಥಿರಾಸ್ತಿಗೆ ಚಕ್ಕುಬಂದಿ ಈ ಕೆಳಗಿನಂತಿರುತ್ತದೆ.

ಪೂರ್ವ : ಎಂ.ಎಚ್. ಮಹಾಲಿಂಗಸ್ವಾಮಿಯವರ ಸೈಟ್

ಪಶ್ಚಿಮ : ಎ. ಕೃಷ್ಣಚಾರ್‌ರವರ ಗೋಡೌನ್

ಉತ್ತರ : ಕನ್ಸರ್‌ವೆನ್ಸಿ

ದಕ್ಷಿಣ : ಮುಖ್ಯ ರಸ್ತೆ, ಈ ಮಧ್ಯದ ಸ್ವತ್ತು.

## ಅನುಬಂಧ

## ಷರತ್ತುಗಳು

1. ಸ್ಥಿರಾಸ್ತಿಯು ಬ್ಯಾಂಕಿಗೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮ ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು -ಯಾ- ಬ್ಯಾಂಕಿಗೆ ಕೊಡಬೇಕಾದ (ಬಾಕಿ) ಸಾಲ ಉಳಿದುಕೊಂಡಲ್ಲಿ ತೀರ್ಪುದಾರರಿಗೆ ತಿಳಿಸತಕ್ಕದ್ದು.
2. ಬ್ಯಾಂಕಿಗೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಬ್ಯಾಂಕಿನ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆ ಗೊಳಪಟ್ಟಿರುತ್ತದೆ.
3. ಬ್ಯಾಂಕು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯ ಮಾರಾಟವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸ್ಥಿರೀಕರಿಸತಕ್ಕದ್ದು.
5. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
6. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಬ್ಯಾಂಕು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
7. ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಬ್ಯಾಂಕು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಸರ್ಟಿಫಿಕೇಟನ್ನು ದಿನಾಂಕ: 12.05.2004 ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಪಿ.ಆರ್. 719 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡವಳಿಕೆಗಳು

**ವಿಷಯ:** ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀಮತಿ ಕೆ.ಎಂ. ಶಾರದಮ್ಮ ಕೋಂ ಲೇಟ್ ಎ.ಆರ್. ಸಿದ್ದೇಶಪ್ಪ, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ರಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ: 333/2002-2003, ದಿನಾಂಕ: 30.11.2002
2) ಅಮಲ್ಜಾರಿ ಪ್ರಕರಣ ಸಂಖ್ಯೆ: 1133/2002-2003.
3) ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ: ಮಾಅ/ಡಿವಿಜಿ/ಮಾಪ್ರಪ/ /2003-04, ದಿನಾಂಕ: 12.03.2004
4) ಬ್ಯಾಂಕಿನ ಆಡಳಿತ ಮಂಡಳಿ ಸಭೆ ತೀರ್ಮಾನ ದಿನಾಂಕ: 23.01.2004.

**ಪ್ರಸ್ತಾವನೆ:**

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಬ್ಯಾಂಕಿನ ಸಾಲಗಾರರಾದ ಶ್ರೀಮತಿ ಕೆ.ಎಂ. ಶಾರದಮ್ಮ ಕೋಂ ಲೇಟ್ ಎ.ಆರ್. ಸಿದ್ದೇಶಪ್ಪ, ಎಂ.ಸಿ.ಸಿ. 'ಬಿ' ಬ್ಲಾಕ್, ದಾವಣಗೆರೆ ಇವರು ದಾವಣಗೆರೆ ಸಿಟಿ, ಎಂ.ಸಿ.ಸಿ. 'ಬಿ' ಬ್ಲಾಕ್‌ನಲ್ಲಿರುವ ಸೈಟ್ ನಂ.75/1ಟಿ-1ಎಂ, ಮನೆ ನಂ.4020, 5ನೇ ವಾರ್ಡ್, 10ನೇ ಡಿವಿಜನ್, ಅಳತೆ 30X58 ಅಡಿಯಲ್ಲಿರುವ ಎರಡು ಮನೆಗಳನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಬ್ಯಾಂಕಿನವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: 333/2002-03, ದಿನಾಂಕ: 30.11.2002 ರಂದು ಒಟ್ಟು ರೂ.10,37,596-00 ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ: 1133/2002-03ನ್ನು ಕಲಂ 101 ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮ ಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ: 24.02.2004 ರಂದು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದ ಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಸದರಿಯವರ ಆಸ್ತಿಯು ಯಾವ ಬಿಡ್ಡುದಾರರು ಭಾಗವಹಿಸದೇ ಇರುವ ಕಾರಣ ಹರಾಜಾಗದೇ ಬ್ಯಾಂಕಿನ ಸಾಲವು ವಸೂಲಾಗದೇ ಇದ್ದು ತೀರ್ಪು ಬಾಕಿದಾರರಿಗೆ ಹಾನಿಯಾಗುತ್ತಿರುವುದನ್ನು ಪರಿಗಣಿಸಿ, ಸದರಿಯವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರುಕಟ್ಟೆಯ ಮೌಲ್ಯಕ್ಕೆ ವರ್ಗಾವಣೆ ಮಾಡಿಕೊಳ್ಳಲು ತೀರ್ಮಾನಿಸಿದೆ. ಈ ಸ್ಥಿರಾಸ್ತಿಯ ಮಾರುಕಟ್ಟೆಯ ಬೆಲೆಯು ರೂ.13 ಲಕ್ಷ (ರೂ.ಹದಿಮೂರು ಲಕ್ಷ ) ಆಗಿರುತ್ತದೆ ಎಂದು ಅಂದಾಜು ಮಾಡಲಾಗಿರುತ್ತದೆ. ಮಾರಾಟಾಧಿಕಾರಿಯವರು ಸಹ ಈ ಬಗ್ಗೆ ಹರಾಜು ನಡವಳಿಕೆಯಲ್ಲಿ ದಾಖಲಿಸಿ ಮಾರುಕಟ್ಟೆ ಮೌಲ್ಯಕ್ಕೆ ಸದರಿ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾಯಿಸಿ ಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ ಈ ಬಗ್ಗೆ ಕಾಯ್ದೆಯನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಪಾಲುಗೊಳ್ಳದೇ ಇರುವ ಪ್ರಯುಕ್ತ ಹಾಗೂ ಬ್ಯಾಂಕು ಈ ಸ್ಥಿರಾಸ್ತಿಯನ್ನು ಮಾರುಕಟ್ಟೆ ಬೆಲೆಗೆ ಸಾಲದ ತೀರುವಳಿ ಕುರಿತಂತೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಮಾರಾಟಾಧಿಕಾರಿಯವರ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ರಡಿಯಲ್ಲಿ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ: ಎಆರ್ 31/ಎಬಿಎನ್/ದಾವಾ/8/2004-05, ದಿನಾಂಕ: 12ನೇ ಮೇ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/509/ಸಿಎಲ್ಎಂ/96, ದಿನಾಂಕ: 21.03.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ದಾವಾ ಸಂಖ್ಯೆ: 333/2002-2003, ದಿನಾಂಕ: 30.11.2002 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ: 1133/2002-2003ರ ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀಮತಿ ಕೆ.ಎಂ. ಶಾರದಮ್ಮ ಕೋಂ ಲೇಟ್ ಎ.ಆರ್. ಸಿದ್ದೇಶಪ್ಪ, ಎಂ.ಸಿ.ಸಿ. 'ಬಿ' ಬ್ಲಾಕ್, ದಾವಣಗೆರೆ ಇವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ, ಎಂ.ಸಿ.ಸಿ. 'ಬಿ' ಬ್ಲಾಕ್‌ನಲ್ಲಿರುವ ಸೈಟ್ ನಂ.75/1ಟಿ-1ಎಂ, ಮನೆ ನಂ.4020, 5ನೇ ವಾರ್ಡ್, 10ನೇ ಡಿವಿಜನ್, ಅಳತೆ 30X58 ಅಡಿಯಲ್ಲಿರುವ ಎರಡು ಮನೆಗಳನ್ನು ಮಾರುಕಟ್ಟೆ ಬೆಲೆಯಾಗಿರುವ ರೂ.13 ಲಕ್ಷ (ರೂ.ಹದಿಮೂರು ಲಕ್ಷ) ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಬ್ಯಾಂಕಿಗೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸ್ವತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ-8 ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿರುವ ಮಾರುಕಟ್ಟೆ ಬೆಲೆಗೆ ಉಲ್ಲೇಖದ ಸ್ಥಿರಾಸ್ತಿಯನ್ನು ತನ್ನ ಹೆಸರಿಗೆ ಬ್ಯಾಂಕು ವರ್ಗಾಯಿಸಿಕೊಂಡು ತೀರ್ಪು ಬಾಕಿದಾರರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸ್ವತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ-ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 12.5.2004 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯ)**

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಪ್ರಧಾನ ವ್ಯವಸ್ಥಾಪಕರು, ಶ್ರೀಮತಿ ಕೆ.ಎಂ. ಶಾರದಮ್ಮ ಕೋಂ ಲೇಟ್ ಎ.ಆರ್. ಸಿದ್ದೇಶಪ್ಪ, ಎಂ.ಸಿ.ಸಿ. 'ಬಿ' ಬ್ಲಾಕ್, ದಾವಣಗೆರೆ ಇವರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿಯಲ್ಲಿ ದಾವಾ ಸಂಖ್ಯೆ: 333/2002-2003 ರಲ್ಲಿ ಸದರಿಯವರಿಂದ ಬ್ಯಾಂಕಿಗೆ ಆಧಾರ ಮಾಡಿರುವ ಈ ಸರ್ಟಿಫಿಕೇಟಿನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡನ್ನು ಪಡೆದಿದ್ದು ಇದನ್ನು ಜಾರಿಗೊಳಿಸಲು ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 15.03.2003, 26.07.2003 ಹಾಗೂ 27.10.2003, 14.01.2004 ಹಾಗೂ 24.02.2004 ರಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: 333/2002-2003 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಬ್ಯಾಂಕಿಗೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಬ್ಯಾಂಕು ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ಮಾರುಕಟ್ಟೆ ದರವನ್ನು ಪರಿಗಣಿಸಿ ರೂ.13 ಲಕ್ಷ (ರೂ.ಹದಿಮೂರು ಲಕ್ಷ ಮಾತ್ರ) ಮೊತ್ತಕ್ಕೆ ಬ್ಯಾಂಕಿನ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿ ವಿವರ | ಅಳತೆ | ಸಾಲ ತೆಗೆದು ಕೊಂಡಿರುವ ಸಾಮ್ಯ ಹಕ್ಕುಬಾಧ್ಯತೆ | ಮಾರುಕಟ್ಟೆ ಮೌಲ್ಯ | ಸ್ವತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ದಾವಣಗೆರೆ | ದಾವಣಗೆರೆ ಸಿಟಿ, ಎಂ.ಸಿ.ಸಿ. 'ಬಿ' ಬ್ಲಾಕ್‌ನಲ್ಲಿರುವ ಸೈಟ್ ನಂ.75/1ಟಿ-1ಎಂ, ಮನೆ ನಂ.4020, 5ನೇ ವಾರ್ಡ್, 10ನೇ ಡಿವಿಜನ್ | 30X58 ಅಡಿ | ಸ್ವಂತ ಸ್ವಾಧೀನ | ರೂ.13 ಲಕ್ಷ | ಅಸಲು, ಬಡ್ಡಿ ಮತ್ತು ಇತರೆ ಖರ್ಚು ಸೇರಿ ಒಟ್ಟು ರೂ.12,79,777-00 (ದಿನಾಂಕ: 24.02.2004ಕ್ಕೆ ಇದ್ದಂತೆ) |

**ಮೇಲ್ಕಂಡ ಸ್ಥಿರಾಸ್ತಿಗೆ ಚಕ್ಕುಬಂದಿ ಈ ಕೆಳಗಿನಂತಿರುತ್ತದೆ.**

ಪೂರ್ವ : 30 ಅಡಿ ರಸ್ತೆ
ಪಶ್ಚಿಮ : ಖಾಲಿ ಜಾಗ
ಉತ್ತರ : ಸರ್ವೆ ನಂ.75 1ಟಿ-1ಎಲ್
ದಕ್ಷಿಣ : 30 ಅಡಿ ರಸ್ತೆ, ಈ ಮಧ್ಯದ ಸ್ವತ್ತು.

**ಅನುಬಂಧ**

**ಷರತ್ತುಗಳು**

1. ಸ್ಥಿರಾಸ್ತಿಯು ಬ್ಯಾಂಕಿಗೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮ ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು -ಯಾ- ಬ್ಯಾಂಕಿಗೆ ಕೊಡಬೇಕಾದ (ಬಾಕಿ) ಸಾಲ ಉಳಿದುಕೊಂಡಲ್ಲಿ ತೀರ್ಪುದಾರರಿಗೆ ತಿಳಿಸತಕ್ಕದ್ದು.
2. ಬ್ಯಾಂಕಿಗೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಬ್ಯಾಂಕಿನ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆ ಗೊಳಪಟ್ಟಿರುತ್ತದೆ.
3. ಬ್ಯಾಂಕು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯ ಮಾರಾಟವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸ್ಥಿರೀಕರಿಸತಕ್ಕದ್ದು.
5. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
6. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಬ್ಯಾಂಕು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
7. ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಬ್ಯಾಂಕು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಸರ್ಟಿಫಿಕೇಟನ್ನು ದಿನಾಂಕ: 12.05.2004 ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಪಿ.ಆರ್. 720 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡವಳಿಕೆಗಳು**

**ವಿಷಯ:** ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀ ಬಿ.ಕೆ. ಬಸವರಾಜಪ್ಪ ಬಿನ್ ಬಿ. ಕೊಟ್ರಪ್ಪ, ಶಾಮನೂರು, ದಾವಣಗೆರೆ ತಾಲ್ಲೂಕು, ವಾಸ: ಚಿತ್ರದುರ್ಗ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ರಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: ಡಿಆರ್/ಡಿವಿಜಿ 339/2001-2002, ದಿನಾಂಕ: 12.05.2003.
2) ಅಮಲ್ಜಾರಿ ಪ್ರಕರಣ ಸಂಖ್ಯೆ: 276/2003-2004.
3) ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ: ಮಾಅ/ಡಿವಿಜಿ/ಮಾಪ್ರಪ/ /2003-04, ದಿನಾಂಕ: 20.03.2004
4) ಬ್ಯಾಂಕಿನ ಆಡಳಿತ ಮಂಡಳಿ ಸಭೆ ತೀರ್ಮಾನ ದಿನಾಂಕ: 24.02.2004.

**ಪ್ರಸ್ತಾವನೆ:**

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಬ್ಯಾಂಕಿನ ಸಾಲಗಾರರಾದ ಶ್ರೀ ಬಿ.ಕೆ. ಬಸವರಾಜಪ್ಪ ಬಿನ್ ಬಿ. ಕೊಟ್ರಪ್ಪ, ಶಾಮನೂರು, ದಾವಣಗೆರೆ ತಾಲ್ಲೂಕು, ವಾಸ: ಚಿತ್ರದುರ್ಗ ಇವರು ಚಿತ್ರದುರ್ಗ ವಿದ್ಯಾನಗರ ಮೆದೆಹಳ್ಳಿ ರಸ್ತೆಯಲ್ಲಿರುವ ಸೈಟ್ ನಂ.51 ಮತ್ತು 52 ರಲ್ಲಿರುವ ಕಟ್ಟಡ 'ಹೋಟೆಲ್ ಸಾಮ್ರಾಟ್'ನ ಸೆಲ್ಲರ್ ಫ್ಲೋರ್, ಗ್ರೌಂಡ್ ಫ್ಲೋರ್, 1, 2 ಮತ್ತು 3ನೇ ಮಹಡಿಗಳು ಅಳತೆ 60X80 ಅಡಿಗಳು ಇವುಗಳನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಬ್ಯಾಂಕಿನವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: ಡಿಆರ್/ಡಿವಿಜಿ 339/2001-2002, ದಿನಾಂಕ: 21.05.2003 ರಂದು ಒಟ್ಟು ರೂ.1,05,37,710-00 ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ: 276/2003-04ನ್ನು ಕಲಂ 101 ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮ ಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ: 05.03.2004 ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಬಿಡ್ಡುದಾರರು ಆಸ್ತಿಯ ಮೌಲ್ಯಕ್ಕೆ ಅನುಗುಣವಾಗಿ ಬಿಡ್ ದರ ಏರಿಕೆ ಮಾಡಿರುವುದಿಲ್ಲ. ಆದ ಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಸದರಿಯವರ ಆಸ್ತಿಯು ಸರಿಯಾದ ಹರಾಜು ಬಾರದೇ ಇರುವ ಕಾರಣ ಹರಾಜಾಗದೇ ಬ್ಯಾಂಕಿನ ಸಾಲವು ವಸೂಲಾಗದೇ ಇದ್ದು ತೀರ್ಪು ಬಾಕಿದಾರರಿಗೆ ಹಾನಿಯಾಗುತ್ತಿರುವುದನ್ನು ಪರಿಗಣಿಸಿ, ಸದರಿಯವರು ಬ್ಯಾಂಕಿಗೆ ಆಧಾರ

ಮಾಡಿರುವ ಸ್ಥಿರಾಸ್ತಿಯನ್ನು ಮಾರುಕಟ್ಟೆಯ ಮೌಲ್ಯಕ್ಕೆ ವರ್ಗಾವಣೆ ಮಾಡಿಕೊಳ್ಳಲು ತೀರ್ಮಾನಿಸಿದೆ. ಈ ಸ್ಥಿರಾಸ್ತಿಯ ಮಾರುಕಟ್ಟೆಯ ಬೆಲೆಯು ರೂ.77.20 ಲಕ್ಷ (ರೂ.ಎಪ್ಪತ್ತೇಳು ಲಕ್ಷ ಇಪ್ಪತ್ತು ಸಾವಿರ) ಆಗಿರುತ್ತದೆ ಎಂದು ಅಂದಾಜು ಮಾಡಲಾಗಿರುತ್ತದೆ. ಮಾರಾಟಾಧಿಕಾರಿಯವರು ಸಹ ಈ ಬಗ್ಗೆ ಹರಾಜು ನಡವಳಿಕೆಯಲ್ಲಿ ದಾಖಲಿಸಿ ಮಾರುಕಟ್ಟೆ ಮೌಲ್ಯಕ್ಕೆ ಸದರಿ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾಯಿಸಿ ಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ ಈ ಬಗ್ಗೆ ಕಾಯ್ದೆಯನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರಿಂದ ಆಸ್ತಿಗನುಗುಣವಾಗಿ ಬಿಡ್ ದರ ಏರಿಕೆ ಮಾಡದೇ ಇರುವ ಪ್ರಯುಕ್ತ ಹಾಗೂ ಬ್ಯಾಂಕು ಈ ಸ್ಥಿರಾಸ್ತಿಯನ್ನು ಮಾರುಕಟ್ಟೆ ಬೆಲೆಗೆ ಸಾಲದ ತೀರುವಳಿ ಕುರಿತಂತೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಮಾರಾಟಾಧಿಕಾರಿಯವರ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ರಡಿಯಲ್ಲಿ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ: ಎಆರ್ 31/ಎಬಿಎನ್/ದಾವಾ/10/2004-05, ದಿನಾಂಕ: 12ನೇ ಮೇ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/509/ಸಿಎಲ್ಎಂ/96, ದಿನಾಂಕ: 21.03.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ದಾವಾ ಸಂಖ್ಯೆ: ಡಿಆರ್/ಡಿವಿಜಿ 339/2001-2002, ದಿನಾಂಕ: 12.05.2003 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ: 276/2003-2004ರ ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀ ಬಿ.ಕೆ. ಬಸವರಾಜಪ್ಪ ಬಿನ್ ಬಿ. ಕೊಟ್ರಪ್ಪ, ಶಾಮನೂರು, ದಾವಣಗೆರೆ ತಾಲ್ಲೂಕು, ವಾಸ: ಚಿತ್ರದುರ್ಗ ಇವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ಚಿತ್ರದುರ್ಗದ ವಿದ್ಯಾನಗರ ಮೆದೆಹಳ್ಳಿ ರಸ್ತೆಯಲ್ಲಿರುವ ಸೈಟ್ ನಂ.51 ಮತ್ತು 52 ರಲ್ಲಿರುವ ಕಟ್ಟಡ 'ಹೋಟೆಲ್ ಸಾಮ್ರಾಟ್'ನ ಸೆಲ್ಲರ್ ಫ್ಲೋರ್, ಗ್ರೌಂಡ್ ಫ್ಲೋರ್, 1, 2 ಮತ್ತು 3ನೇ ಮಹಡಿಗಳು ಅಳತೆ 60X80 ಅಡಿ ಮತ್ತು ಆರು ಸೈಟುಗಳು ಅವುಗಳ ನಂ.49, 50, 57, 58, 59 ಮತ್ತು 60 ಪ್ರತಿ ಸೈಟುಗಳ ಅಳತೆ 60X40 ಅಡಿಗಳು ಇವುಗಳ ಮಾರುಕಟ್ಟೆ ಬೆಲೆಯಾಗಿರುವ ರೂ.77.20 ಲಕ್ಷ (ರೂ.ಎಪ್ಪತ್ತೇಳು ಲಕ್ಷ ಇಪ್ಪತ್ತು ಸಾವಿರ) ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಬ್ಯಾಂಕಿಗೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸ್ವತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ-8 ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿರುವ ಮಾರುಕಟ್ಟೆ ಬೆಲೆಗೆ ಉಲ್ಲೇಖಿದ ಸ್ಥಿರಾಸ್ತಿಯನ್ನು ತನ್ನ ಹೆಸರಿಗೆ ಬ್ಯಾಂಕು ವರ್ಗಾಯಿಸಿಕೊಂಡು ತೀರ್ಪು ಬಾಕಿದಾರರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸ್ವತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ-ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 12.5.2004 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯ)**

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಪ್ರಧಾನ ವ್ಯವಸ್ಥಾಪಕರು, ಶ್ರೀ ಬಿ.ಕೆ. ಬಸವರಾಜಪ್ಪ ಬಿನ್ ಬಿ. ಕೊಟ್ರಪ್ಪ, ಶಾಮನೂರು, ದಾವಣಗೆರೆ ತಾಲ್ಲೂಕು, ವಾಸ: ಚಿತ್ರದುರ್ಗ ಇವರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿಯಲ್ಲಿ ದಾವಾ ಸಂಖ್ಯೆ: ಡಿಆರ್/ಡಿವಿಜಿ 339/2001-2002 ರಲ್ಲಿ ಸದರಿಯವರಿಂದ ಬ್ಯಾಂಕಿಗೆ ಆಧಾರ ಮಾಡಿರುವ ಈ ಸರ್ಟಿಫಿಕೇಟಿನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡನ್ನು ಪಡೆದಿದ್ದು ಇದನ್ನು ಜಾರಿಗೊಳಿಸಲು ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 19.08.2003, 22.09.2003 ಮತ್ತು 05.03.2004 ರಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: ಡಿಆರ್/ಡಿವಿಜಿ 339/2001-2002 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಬ್ಯಾಂಕಿಗೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಬ್ಯಾಂಕು ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ತೀರ್ಪು ಬಾಕಿದಾರರು ಸೂಚಿಸಿರುವ ಸಮ್ಮತಿಯನ್ನು ಪರಿಗಣಿಸಿ ಮಾರುಕಟ್ಟೆ ದರ ರೂ.77.20 ಲಕ್ಷ (ರೂ.ಎಪ್ಪತ್ತೇಳು ಲಕ್ಷ ಇಪ್ಪತ್ತು ಸಾವಿರ) ಮೊತ್ತಕ್ಕೆ ಬ್ಯಾಂಕಿನ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

ಸ್ಥಳ: ಚಿತ್ರದುರ್ಗ

ಸ್ಥಿರಾಸ್ತಿ ವಿವರ, ಅಳತೆ ಮತ್ತು ಸ್ಥಿರಾಸ್ತಿಗೆ ಚಕ್ಕುಬಂದಿ:

60X80 ಅಡಿ ಸೊತ್ತಿನ ಕಟ್ಟಡ 'ಹೋಟೆಲ್ ಸಾಮ್ರಾಟ್' ಹೊಂದಿರುವ ಸೆಲ್ಲರ್ ಫ್ಲೋರ್, ಗ್ರೌಂಡ್ ಫ್ಲೋರ್, 1,2 ಮತ್ತು 3ನೇ ಮಹಡಿಗಳು ಶ್ರೀ ಬಿ.ಕೆ. ಬಸವರಾಜಪ್ಪ ಬಿನ್ ಬಿ. ಕೊಟ್ರಪ್ಪ, ಚಿತ್ರದುರ್ಗದ ವಿದ್ಯಾನಗರ, ಮೆದೆಹಳ್ಳಿ ರಸ್ತೆಯಲ್ಲಿರುವ ಸೈಟ್ ನಂ.51 ಮತ್ತು 52, ಖಾತೆ ನಂ.1216 ಮತ್ತು 1217 ಇವು ಸದ್ರಿಯವರಿಗೆ ಸೇರಿರುತ್ತವೆ ಮತ್ತು ಅವುಗಳಿಗೆ ಹೊಂದಿಕೊಂಡಿರುವ ಆರು (6) ಸೈಟ್‌ಗಳು ಪ್ರತಿಯೊಂದರ ಅಳತೆ 60X40 ಅಡಿಗಳಿದ್ದು ಸೈಟ್ ನಂ.49, 50, 57, 58, 59 ಮತ್ತು 60 ಮತ್ತು ಖಾತೆ/ಆಸ್ತಿ ನಂ.546/1214, 547/1215, 554/1222, 555/1223, 556/1224 ಮತ್ತು 557/1225 ಕ್ರಮವಾಗಿದ್ದು ಇವು ಸಹ ಸೇರಿರುತ್ತವೆ.

**ಈ ಸೊತ್ತುಗಳಿಗೆ ಚತುರ್ಗಡಿ:**

| ಸೈಟ್ ನಂ. | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|
| 51 ಮತ್ತು 52 | ರಸ್ತೆ | ಸೈಟ್ ನಂ.56,57 | ಸೈಟ್ ನಂ.53 | ಸೈಟ್ ನಂ.50 |
| 49 | ರಸ್ತೆ | ಸೈಟ್ ನಂ.61 | ಸೈಟ್ ನಂ.50 | ಸೈಟ್ ನಂ.48 |
| 50 | ರಸ್ತೆ | ಸೈಟ್ ನಂ.60 | ಸೈಟ್ ನಂ.51 | ಸೈಟ್ ನಂ.49 |
| 57 | ಸೈಟ್ ನಂ.53 | 30 ಅಡಿ ರಸ್ತೆ | ಸೈಟ್ ನಂ.56 | ಸೈಟ್ ನಂ.58 |
| 58 | ಸೈಟ್ ನಂ.52 | 30 ಅಡಿ ರಸ್ತೆ | ಸೈಟ್ ನಂ.57 | ಸೈಟ್ ನಂ.59 |
| 59 | ಸೈಟ್ ನಂ.51 | 30 ಅಡಿ ರಸ್ತೆ | ಸೈಟ್ ನಂ.58 | ಸೈಟ್ ನಂ.60 |
| 60 | ಸೈಟ್ ನಂ.50 | 30 ಅಡಿ ರಸ್ತೆ | ಸೈಟ್ ನಂ.59 | ಸೈಟ್ ನಂ.61 |

**ಸಾಲ ತೆಗೆದುಕೊಂಡಿರುವ ಸಾಮ್ಯ ಹಕ್ಕುಬಾಧ್ಯತೆ:** ಸ್ವಂತ ಸ್ವಾಧೀನ

**ಮಾರುಕಟ್ಟೆ ಮೌಲ್ಯ:** ರೂ.77.20 ಲಕ್ಷ (ರೂ.ಎಪ್ಪತ್ತೇಳು ಲಕ್ಷ ಇಪ್ಪತ್ತು ಸಾವಿರ)

**ಸ್ವತ್ತು ಒಳಪಟ್ಟಿರುವ ಸಾಲದ ವಿವರಗಳು:** ಅಸಲು, ಬಡ್ಡಿ ಮತ್ತು ಇತರೆ ಖರ್ಚು ಸೇರಿ ಒಟ್ಟು ರೂ.1,20,68,871-00

(ದಿನಾಂಕ: 05.03.2004ಕ್ಕೆ ಇದ್ದಂತೆ)

**ಅನುಬಂಧ**

**ಷರತ್ತುಗಳು**

1. ಸ್ಥಿರಾಸ್ತಿಯು ಬ್ಯಾಂಕಿಗೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮ ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು -ಯಾ- ಬ್ಯಾಂಕಿಗೆ ಕೊಡಬೇಕಾದ (ಬಾಕಿ) ಸಾಲ ಉಳಿದುಕೊಂಡಲ್ಲಿ ತೀರ್ಪುದಾರರಿಗೆ ತಿಳಿಸತಕ್ಕದ್ದು.
2. ಬ್ಯಾಂಕಿಗೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಬ್ಯಾಂಕಿನ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆ ಗೊಳಪಟ್ಟಿರುತ್ತದೆ.
3. ಬ್ಯಾಂಕು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯ ಮಾರಾಟವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸ್ಥಿರೀಕರಿಸತಕ್ಕದ್ದು.
5. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
6. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಬ್ಯಾಂಕು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
7. ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಬ್ಯಾಂಕು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಸರ್ಟಿಫಿಕೇಟನ್ನು ದಿನಾಂಕ: 12.05.2004 ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಪಿ.ಆರ್. 721 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ**

**ಇವರ ನಡವಳಿಕೆಗಳು**

**ವಿಷಯ:** ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀ ಎಚ್.ಎಂ. ಮಹೇಶ್ವರಪ್ಪ, ತರಳಬಾಳು ಬಡಾವಣೆ, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ರಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ: 334/2002-2003, ದಿನಾಂಕ: 26.10.2002
2) ಅಮಲ್ಜಾರಿ ಪ್ರಕರಣ ಸಂಖ್ಯೆ: 1094/2002-2003.
3) ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ: ಮಾಅ/ಡಿವಿಜಿ/ಮಾಪ್ರಪ/1/2003-04, ದಿನಾಂಕ: 31.01.2004
4) ಬ್ಯಾಂಕಿನ ಆಡಳಿತ ಮಂಡಳಿ ಸಭೆ ತೀರ್ಮಾನ ದಿನಾಂಕ: 23.01.2004.

ಪ್ರಸ್ತಾವನೆ:

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಬ್ಯಾಂಕಿನ ಸಾಲಗಾರರಾದ ಶ್ರೀ ಎಚ್.ಎಂ. ಮಹೇಶ್ವರಪ್ಪ, ತರಳಬಾಳು ಬಡಾವಣೆ, ದಾವಣಗೆರೆ ಇವರು ದಾವಣಗೆರೆ ಸಿಟಿ ತರಳಬಾಳು ಬಡಾವಣೆ, 13ನೇ ಕ್ರಾಸ್, ಸೈಟ್ ನಂ.88, ಮನೆ ನಂ.2000/88, ಅಳತೆ 40X60 ಅಡಿಯ ಮನೆಯನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಬ್ಯಾಂಕಿನವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: 334/2002-03, ದಿನಾಂಕ: 26.10.2002 ರಂದು ಒಟ್ಟು ರೂ.6,79,875-00 ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ: 1094/2002-03ನ್ನು ಕಲಂ 101 ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಬ್ಯಾಂಕಿಗೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮ ಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ: 27.01.2004 ರಂದು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದ ಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಸದರಿಯವರ ಆಸ್ತಿಯು ಯಾವ ಬಿಡ್ಡುದಾರರು ಭಾಗವಹಿಸದೇ ಇರುವ ಕಾರಣ ಹರಾಜಾಗದೇ ಬ್ಯಾಂಕಿನ ಸಾಲವು ವಸೂಲಾಗದೇ ಇದ್ದು ತೀರ್ಪು ಬಾಕಿದಾರರಿಗೆ ಹಾನಿಯಾಗುತ್ತಿರುವುದನ್ನು ಪರಿಗಣಿಸಿ, ಸದರಿಯವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರುಕಟ್ಟೆಯ ಮೌಲ್ಯಕ್ಕೆ ವರ್ಗಾವಣೆ ಮಾಡಿಕೊಳ್ಳಲು ತೀರ್ಮಾನಿಸಿದೆ. ಈ ಸ್ಥಿರಾಸ್ತಿಯ ಮಾರುಕಟ್ಟೆಯ ಬೆಲೆಯು ರೂ.8 ಲಕ್ಷ (ರೂ.ಎಂಟು ಲಕ್ಷ) ಆಗಿರುತ್ತದೆ ಎಂದು ಅಂದಾಜು ಮಾಡಲಾಗಿರುತ್ತದೆ. ಮಾರಾಟಾಧಿಕಾರಿಯವರು ಸಹ ಈ ಬಗ್ಗೆ ಹರಾಜು ನಡವಳಿಕೆಯಲ್ಲಿ ದಾಖಲಿಸಿ ಮಾರುಕಟ್ಟೆ ಮೌಲ್ಯಕ್ಕೆ ಸದರಿ ಸ್ಥಿರಾಸ್ತಿಯನ್ನು ಬ್ಯಾಂಕಿಗೆ ವರ್ಗಾಯಿಸಿ ಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ ಈ ಬಗ್ಗೆ ಕಾಯ್ದೆಯನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಪಾಲುಗೊಳ್ಳದೇ ಇರುವ ಪ್ರಯುಕ್ತ ಹಾಗೂ ಬ್ಯಾಂಕು ಈ ಸ್ಥಿರಾಸ್ತಿಯನ್ನು ಮಾರುಕಟ್ಟೆ ಬೆಲೆಗೆ ಸಾಲದ ತೀರುವಳಿ ಕುರಿತಂತೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಮಾರಾಟಾಧಿಕಾರಿಯವರ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ರಡಿಯಲ್ಲಿ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ: ಎಆರ್ 31/ಎಬಿಎನ್/ದಾವಾ/7/2004-05, ದಿನಾಂಕ: 12ನೇ ಮೇ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/509/ಸಿಎಲ್‌ಎಂ/96, ದಿನಾಂಕ: 21.03.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ದಾವಾ ಸಂಖ್ಯೆ: 334/2002-2003, ದಿನಾಂಕ: 26.10.2002 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ: 1094/2002-2003ರ ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀ ಎಚ್.ಎಂ. ಮಹೇಶ್ವರಪ್ಪ, ತರಳಬಾಳು ಬಡಾವಣೆ, ದಾವಣಗೆರೆ ಇವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ ತರಳಬಾಳು ಬಡಾವಣೆ, 13ನೇ ಕ್ರಾಸ್, ಸೈಟ್ ನಂ.88, ಮನೆ ನಂ.2000/88, ಅಳತೆ 40X60 ಅಡಿಯಲ್ಲಿರುವ ಮನೆಯನ್ನು ಮಾರುಕಟ್ಟೆ ಬೆಲೆಯಾಗಿರುವ ರೂ.8 ಲಕ್ಷ (ರೂ.ಎಂಟು ಲಕ್ಷ) ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಬ್ಯಾಂಕಿಗೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸ್ವತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ-8 ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿರುವ ಮಾರುಕಟ್ಟೆ ಬೆಲೆಗೆ ಉಲ್ಲೇಖದ ಸ್ಥಿರಾಸ್ತಿಯನ್ನು ತನ್ನ ಹೆಸರಿಗೆ ಬ್ಯಾಂಕು ವರ್ಗಾಯಿಸಿಕೊಂಡು ತೀರ್ಪು ಬಾಕಿದಾರರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸ್ವತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ-ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 12.5.2004 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯ)**

ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಪ್ರಧಾನ ವ್ಯವಸ್ಥಾಪಕರು, ಶ್ರೀ ಎಚ್.ಎಂ. ಮಹೇಶ್ವರಪ್ಪ, ತರಳಬಾಳು ಬಡಾವಣೆ, ದಾವಣಗೆರೆ ಇವರಿಂದ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿಯಲ್ಲಿ ದಾವಾ ಸಂಖ್ಯೆ: 334/2002-2003 ರಲ್ಲಿ ಸದರಿಯವರಿಂದ ಬ್ಯಾಂಕಿಗೆ ಆಧಾರ ಮಾಡಿರುವ ಈ ಸರ್ಟಿಫಿಕೇಟಿನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು

ಅವಾರ್ಡನ್ನು ಪಡೆದಿದ್ದು ಇದನ್ನು ಜಾರಿಗೊಳಿಸಲು ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 28.07.2003, 20.12.2003 ಹಾಗೂ 27.01.2004 ರಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: 334/2002-2003 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಬ್ಯಾಂಕಿಗೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಬ್ಯಾಂಕು ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ಮಾರುಕಟ್ಟೆ ದರವನ್ನು ಪರಿಗಣಿಸಿ ರೂ.8 ಲಕ್ಷ (ರೂ.ಎಂಟು ಲಕ್ಷ) ಮೊತ್ತಕ್ಕೆ ಬ್ಯಾಂಕಿನ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿ ವಿವರ | ಅಳತೆ | ಸಾಲ ತೆಗೆದು ಕೊಂಡಿರುವ ಸಾಮ್ಯ ಹಕ್ಕುಭಾದ್ಯತೆ | ಮಾರುಕಟ್ಟೆ ಮೌಲ್ಯ | ಸ್ವತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ದಾವಣಗೆರೆ | ದಾವಣಗೆರೆ ಸಿಟಿ, ತರಳಬಾಳು ಬಡಾವಣೆ, 13ನೇ ಕ್ರಾಸ್, ಮನೆ ನಂ.2000/88 ಸೈಟ್ ನಂ.88 | 40X60 ಅಡಿ | ಸ್ವಂತ ಸ್ವಾಧೀನ | ರೂ.8 ಲಕ್ಷ | ಅಸಲು, ಬಡ್ಡಿ ಮತ್ತು ಇತರೆ ಖರ್ಚು ಸೇರಿ ಒಟ್ಟು ರೂ.6,90,175-00 (ದಿನಾಂಕ: 27.01.2004ಕ್ಕೆ ಇದ್ದಂತೆ) |

**ಮೇಲ್ಕಂಡ ಸ್ಥಿರಾಸ್ತಿಗೆ ಚಕ್ಕುಬಂದಿ ಈ ಕೆಳಗಿನಂತಿರುತ್ತದೆ.**

ಪೂರ್ವ : ಸೈಟ್ ನಂ.89
ಪಶ್ಚಿಮ : ಸೈಟ್ ನಂ.87
ಉತ್ತರ : ಸೈಟ್ ನಂ.71
ದಕ್ಷಿಣ : 40 ಅಡಿ ರಸ್ತೆ, ಈ ಮಧ್ಯದ ಸ್ವತ್ತು.

**ಅನುಬಂಧ**

**ಷರತ್ತುಗಳು**

1. ಸ್ಥಿರಾಸ್ತಿಯು ಬ್ಯಾಂಕಿಗೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮ ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು ಬ್ಯಾಂಕಿಗೆ ಕೊಡಬೇಕಾದ (ಬಾಕಿ) ಸಾಲ ಉಳಿದುಕೊಂಡಲ್ಲಿ ತೀರ್ಪುದಾರರಿಗೆ ತಿಳಿಸತಕ್ಕದ್ದು.
2. ಬ್ಯಾಂಕಿಗೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಬ್ಯಾಂಕಿನ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆ ಗೊಳಪಟ್ಟಿರುತ್ತದೆ.
3. ಬ್ಯಾಂಕು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯ ಮಾರಾಟವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸ್ಥಿರೀಕರಿಸತಕ್ಕದ್ದು.
5. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
6. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಬ್ಯಾಂಕು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
7. ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಬ್ಯಾಂಕು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಸರ್ಟಿಫಿಕೇಟನ್ನು ದಿನಾಂಕ: 12.05.2004 ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಪಿ.ಆರ್. 722 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ:551:ಡಿಟಿಸಿಆರ್:1999-2000, ದಿನಾಂಕ: 13ನೇ ಮೇ 2004**

**ಉಪಸ್ಥಿತರು:** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು** **ವಿರುದ್ಧ** **ಆರೋಪಿಗಳು**

ಅಬಕಾರಿ ನಿರೀಕ್ಷಕರು, ನಂ.3, ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು.

1) ಆರೋಪಿ ಪರಾರಿಯಾಗಿರುತ್ತಾರೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 12.05.2000 ರಂದು ಬೆಳಿಗ್ಗೆ 5.00 ಗಂಟೆ ಸಮಯದಲ್ಲಿ ಗುಪ್ತವಾರ್ತಾದಳದ ಅಬಕಾರಿ ನಿರೀಕ್ಷಕರು ತಮ್ಮ ಉಪ ಅಧೀಕ್ಷಕರೊಂದಿಗೆ ಮಂಗಳೂರು ಮಹಾನಗರಪಾಲಿಕೆಯ ಕದ್ರಿ ದೂರವಾಣಿಯ ಮುಂಭಾಗ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ:17 ರಲ್ಲಿ ಶಂಕಿತ ವಾಹನಗಳನ್ನು ತಪಾಸಣೆ ಮಾಡುತ್ತಿದ್ದಾಗ ನಂತೂರು ಕಡೆಯಿಂದ ಕೂಳೂರು ಕಡೆಗೆ ಲಾರಿ ಸಂಖ್ಯೆ: ಸಿಆರ್‌ಎಕ್ಸ್:9259 ಬರುತ್ತಿದ್ದು, ಅನುಮಾನದ ಮೇಲೆ ಸದ್ರಿ ಲಾರಿಯನ್ನು ನಿಲ್ಲಿಸಿದಾಗ ಲಾರಿಯ ಚಾಲಕ ಮತ್ತು ಅವನೊಂದಿಗೆ ಇನ್ನೊಬ್ಬ ಕುಳಿತಿದ್ದು ಚಾಲಕನಲ್ಲಿ ಲಾರಿಯಲ್ಲಿರುವ ಸರಕಿನ ಬಗ್ಗೆ ವಿಚಾರಿಸಲು ಚೆರಿ ಕಾಫಿ ಎಂದು ತಿಳಿಸಿ ಸಂಬಂಧಿಸಿದ ಡೆಲಿವರಿ ನೋಟ್ ಸಂಖ್ಯೆ: 0041 ಮತ್ತು 0042, ದಿನಾಂಕ: 11.5.2000ನ್ನು ಹಾಜರುಪಡಿಸಲಾಗಿ, ಡೆಲಿವರಿ ನೋಟ್ ಪ್ರಕಾರ ಲಾರಿಯಲ್ಲಿ ಒಟ್ಟು 50 ಕೆ.ಜಿ.ಯ 182 ಚೀಲ ಚೆರಿ ಕಾಫಿ ಎಂದು ನಮೂದಿಸಿದ್ದು ಕಂಡು ಬಂದಿದ್ದು ಲಾರಿಯಲ್ಲಿದ್ದ ಸರಕಿನ ಒಳಗಿನಿಂದ ತುಂಬಾ ಮದ್ಯದ ಘಾಟುವಾಸನೆ ಬರುತ್ತಿದ್ದು ಅನುಮಾನದ ಮೇಲೆ ಸದ್ರಿ ಲಾರಿಯಲ್ಲಿದ್ದ ಸರಕನ್ನು ಪರಿಶೀಲಿಸಲು ತೀರ್ಮಾನಿಸಿ ಲಾರಿಗೆ ಹೊದಿಸಿದ್ದ ಟಾರ್ಪಾಲ್‌ಗೆ ಬಿಗಿದಿದ್ದ ಹಗ್ಗವನ್ನು ಲಾರಿಯ ಚಾಲಕ ಹಾಗೂ ಆತನ ಸಹಾಯಕರು ಬಿಚ್ಚುತ್ತಿದ್ದಾಗ ಸಾಕ್ಷಿಯವರನ್ನು ಕರೆಯಿಸಿ ಅವರಿಗೆ ವಿಷಯ ತಿಳಿಸಿ ಲಾರಿ ಶೋಧನೆ ಬಗ್ಗೆ ನ್ಯಾಯಾಲಯದಿಂದ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಸರ್ಚ್ ಮೆಮೋವನ್ನು ತಯಾರಿಸುತ್ತಿದ್ದಾಗ ಲಾರಿಯ ಚಾಲಕ ಹಾಗೂ ಆತನ ಸಹಾಯಕ ಓಡಿಹೋದರು. ಇದರಿಂದ ಅನುಮಾನಗೊಂಡು ಲಾರಿಯ ಟಾರ್ಪಾಲನ್ನು ಬಿಚ್ಚಿ ನೋಡಲಾಗಿ ಚೆರಿ ಕಾಫಿಯನ್ನು ತುಂಬಿದ ಚೀಲಗಳು ಕಂಡು ಬಂದವು. ಚೀಲಗಳ ಕೆಳಗೆ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಕಂಡುಬಂದವು. ಹೀಗೆ ಚೆರಿ ಕಾಫಿ ಚೀಲದ ಕೆಳಗೆ ಮದ್ಯವನ್ನು ಕಳ್ಳಸಾಗಣೆ ಮಾಡುವುದು ಖಾತ್ರಿಯಾಗಿ ಕ್ಯಾಬಿನ್‌ನನ್ನು ಶೋಧನೆ ಮಾಡಲಾಗಿ ಲಾರಿಗೆ ಸಂಬಂಧಪಟ್ಟ ಓರಿಯೆಂಟಲ್ ಇನ್ಶೂರೆನ್ಸ್ ಸರ್ಟಿಫಿಕೇಟ್ ದೊರೆತಿದ್ದು ಮದ್ಯ ಸಾಗಾಣಿಕೆ ಯಾವುದೇ ದಾಖಲೆಗಳು ದೊರೆತಿರುವುದಿಲ್ಲ. ಕಾಫಿ ತುಂಬಿದ ಚೆರಿ ಚೀಲಗಳನ್ನು ಪರಿಶೀಲನೆ ಮಾಡಲಾಗಿ 50 ಕೆ.ಜಿ. ತುಂಬಿದ ಒಟ್ಟು 70 ಚೀಲಗಳು ಕಂಡು ಬಂದಿದ್ದು ಚೀಲಗಳ ಕೆಳಗೆ ಈ ಕೆಳಕಂಡಂತೆ ಮದ್ಯದ ಪೆಟ್ಟಿಗೆಗಳು ಕಂಡುಬಂದವು.

| | | |
|---|---|---|
| 1. | ಬ್ಯಾಗ್ ಪೈಪರ್ ವಿಸ್ಕಿ | - 750 ಮಿಲಿ x 12X270 ಪೆಟ್ಟಿಗೆಗಳು |
| 2. | ಬ್ಯಾಗ್ ಪೈಪರ್ ವಿಸ್ಕಿ | - 180 ಮಿಲಿ x 48X34 ಪೆಟ್ಟಿಗೆಗಳು |
| 3. | ಬ್ಯಾಗ್ ಪೈಪರ್ ಗೋಲ್ಡ್ | - 750 ಮಿಲಿ x 12X25 ಪೆಟ್ಟಿಗೆಗಳು |
| 4. | ಮೆಕ್‌ಡೊವೆಲ್ ವಿಸ್ಕಿ | - 750 ಮಿಲಿ x 12X15 ಪೆಟ್ಟಿಗೆಗಳು |
| 5. | ಮೆಕ್‌ಡೊವೆಲ್ ವಿಸ್ಕಿ | - 375 ಮಿಲಿ x 24X17 ಪೆಟ್ಟಿಗೆಗಳು |
| 6. | ಮೆಕ್‌ಡೊವೆಲ್ ವಿಸ್ಕಿ | - 180 ಮಿಲಿ x 48X55 ಪೆಟ್ಟಿಗೆಗಳು |
| 7. | ಮೆಕ್‌ಡೊವೆಲ್ ಬ್ರಾಂಡಿ | - 180 ಮಿಲಿ x 48X10 ಪೆಟ್ಟಿಗೆಗಳು |
| 8. | ಮೆಕ್‌ಡೊವೆಲ್ ಬ್ರಾಂಡಿ | - 750 ಮಿಲಿ x 12X5 ಪೆಟ್ಟಿಗೆಗಳು |
| | | **ಒಟ್ಟು 431 ಪೆಟ್ಟಿಗೆಗಳು** |

ಮೇಲಿನ 431 ಪೆಟ್ಟಿಗೆಗಳಲ್ಲಿ 3843.360 ಲೀಟರು ಮದ್ಯವಿದ್ದು ಅದನ್ನು ರಹದಾರಿ ಪತ್ರಗಳಿಲ್ಲದೇ ಸಾಗಾಟಮಾಡುವುದು ರಾಜ್ಯ ಅಬಕಾರಿ ಕಾನೂನಿಗೆ ವಿರೋಧವೆಂದು ಪಂಚರಿಗೆ ಮನವರಿಕೆ ಮಾಡಿ ಲಾರಿ ಚಾಲಕ ಮತ್ತು ಕ್ಲೀನರ್ ಮಾಡಿರುವುದು ಅಪರಾಧವೆಂದು ತಿಳಿಸಿ ರಾಸಾಯನಿಕ ಮಾದರಿಗಾಗಿ ತರಹೆವಾರು ಹಾಗೂ ಗಾತ್ರವಾರು ಮದ್ಯದಿಂದ ಒಂದೊಂದು ಶೀಷೆಯನ್ನು ತೆಗೆದು ಮೊಹರು ಮಾಡಿ ಸದ್ರಿ ಶೀಷೆಗಳಿಗೆ ಗುರುತಿನ ಚೀಟಿಗಳನ್ನು ಅಂಟಿಸಿ ಮೊಹರಿನ ಮಾದರಿಯನ್ನು ತಯಾರಿಸಲಾಯಿತು. ಸದ್ರಿ ಮದ್ಯದ ಬಾಟ್ಲಿಗಳ ಮೇಲೆ ಮದ್ಯ ತಯಾರಾದ ಡಿಸ್ಟಿಲರಿಯ ಹೆಸರು, ಮದ್ಯದ ಹೆಸರು, ತೀಕ್ಷ್ಣತೆ ಹಾಗೂ ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂದು ಬರೆಯಲಾಗಿದ್ದ ಚೀಟಿಗಳನ್ನು ಅಂಟಿಸಲಾಗಿತ್ತು. ಲಾರಿಯ ಸಂಖ್ಯೆ: ಸಿಆರ್‌ಎಕ್ಸ್:9259 ಇದ್ದು ಇದರ ಇಂಜಿನ್ ಸಂಖ್ಯೆ: ಇ-285278 ಎಂದು ಇದ್ದು ಚಾಸಿಸ್ ಸಂಖ್ಯೆ ಸ್ಪಷ್ಟವಾಗಿ ಕಂಡುಬಂದಿರುವುದಿಲ್ಲ ಮತ್ತು ಲಾರಿಯಲ್ಲಿ ಒಂದು ಹೆಚ್ಚುವರಿ ಬಿಡಿ ಚಕ್ರವಿರುತ್ತದೆ. ರಾಸಾಯನಿಕ ಪರೀಕ್ಷೆಗಾಗಿ ಮೇಲಿನ ಮದ್ಯದ ಕ್ರ.ಸಂ.1 ರಿಂದ 3.750 ಮಿಲಿ ಬಾಟ್ಲಿಗಳನ್ನು ಹಾಗೂ ಉಳಿದ ಮದ್ಯದಿಂದ ತಲಾ ಒಂದೊಂದರಂತೆ 750 ಮಿಲಿಯ 6 ಶೀಷೆಗಳನ್ನು 375 ಮಿಲಿಯ 1 ಶೀಷೆಯನ್ನು ಹಾಗೂ 180 ಮಿಲಿಯ 3 ಶೀಷೆಗಳನ್ನು ಒಟ್ಟು 10 ಶೀಷೆಗಳನ್ನು ತೆಗೆದು ಸ್ಥಳದಲ್ಲಿಯೇ ಪಂಚನಾಮೆಯನ್ನು ತಯಾರಿಸಿ ದೊರೆತ ಎಲ್ಲಾ ವಸ್ತುಗಳನ್ನು ಜಪ್ತು ಮಾಡಿ ಇಲಾಖೆಯ ವಶಕ್ಕೆ ತೆಗೆದುಕೊಂಡು ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11 ಮತ್ತು 14ರ ಪ್ರಕಾರ ಅಪರಾಧವಾಗಿದ್ದು ಕಲಂ 34 ಮತ್ತು 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಪ್ರ.ಮಾ.ವ. ಸಂಖ್ಯೆ: 37/99-2000 ದಿನಾಂಕ: 12.5.2000ರ ಮೂಲಕ ಪ್ರಕರಣವನ್ನು ದಾಖಲಿಸಿ ಪ್ರಥಮ ಮಾಹಿತಿ ವರದಿಯನ್ನು ಹಾಗೂ ಮಹಜರನ್ನು ಮಾನ್ಯ ನ್ಯಾಯಾಲಯಕ್ಕೂ ಈ ಪ್ರಾಧಿಕಾರಕ್ಕೂ ಸಲ್ಲಿಸಿರುತ್ತಾರೆ. ಹಾಗೂ ಜಪ್ತು ಪಡಿಸಲಾಗಿರುವ ವಸ್ತುಗಳನ್ನು ತಮ್ಮ ಸ್ವಾಧೀನದಲ್ಲಿ ಇಟ್ಟುಕೊಳ್ಳಲು ಅನುಮತಿ ಪಡೆದಿರುತ್ತಾರೆ. ಈ ಪ್ರಾಧಿಕಾರದ ಅನುಮತಿಯಂತೆ ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ನಂತರ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದ ಮಾಲೀಕರು ಈ ಪ್ರಾಧಿಕಾರಕ್ಕೆ ತಮ್ಮ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ಜಪ್ತು ಪಡಿಸಿದ ಲಾರಿಯನ್ನು ಹಾಗೂ ಕಾಫಿ ಚೆರಿಯನ್ನು ಮಧ್ಯಂತರ ಬಿಡುಗಡೆಗೆ ಕೋರಿ ದಿನಾಂಕ: 18.5.2000 ಹಾಗೂ 30.5.2000 ರಂದು ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರ ಮಧ್ಯಂತರ ಬಿಡುಗಡೆಗೆ ಅರ್ಜಿಯನ್ನು ತಿರಸ್ಕರಿಸಿ ಈ ಪ್ರಾಧಿಕಾರವು ದಿನಾಂಕ: 13.7.2000 ರಂದು ಆದೇಶ ನೀಡಿರುತ್ತದೆ. ಈ ಪ್ರಾಧಿಕಾರದ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಿದ್ದು ಮಾನ್ಯ ಸತ್ರ ನ್ಯಾಯಾಲಯವು ಜಪ್ತು ಪಡಿಸಿರುವ ವಾಹನ ಹಾಗೂ ಕಾಫಿ ಚೆರಿಯನ್ನು ರೂ.5,00,000/- ಗಳ ಇಂಡೆಮ್ನಿಟಿ ಬಾಂಡ್ ಮತ್ತು ಅಷ್ಟೇ ಮೊತ್ತಕ್ಕೆ 2 ಜಾಮೀನನ್ನು ಪಡೆದು ಇತರ ಷರತ್ತುಗಳೊಂದಿಗೆ ಬಿಡುಗಡೆಗೊಳಿಸಲು ಆದೇಶ ನೀಡಿದ್ದು

ಈ ಪ್ರಾಧಿಕಾರವು ಸತ್ರ ನ್ಯಾಯಾಲಯದ ಆದೇಶದನ್ವಯ ದಿನಾಂಕ: 10.8.2000 ರಂದು ವಾಹನವನ್ನು ಹಾಗೂ ಕಾಫಿ ಚೆರಿಯನ್ನು ಬಿಡುಗಡೆಗೊಳಿಸಿರುತ್ತದೆ. ಪ್ರಾಧಿಕಾರವು ಕಲಂ 43ಬಿ ಪ್ರಕಾರ ವಾಹನ ಮಾಲೀಕರಿಗೆ ದಿನಾಂಕ: 23.9.2000 ರಂದು ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು ಸದ್ರಿ ಕಾರಣ ಕೇಳಿ ನೀಡಿದ್ದ ನೋಟೀಸಿಗೆ ವಾಹನ ಮಾಲೀಕರು ತಮ್ಮ ವಕೀಲರ ಮುಖಾಂತರ ದಿನಾಂಕ: 16.10.2000 ರಂದು ಉತ್ತರ ನೀಡಿರುತ್ತಾರೆ. ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಮದ್ಯವು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮಾನವ ಸೇವನೆಗೆ ಯೋಗ್ಯವಾಗಿರುವುದರಿಂದ ಜಪ್ತುಗೊಳಿಸಲಾಗಿರುವ ಮದ್ಯವನ್ನು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ವಿಲೇವಾರಿ ಮಾಡಲು ದಿನಾಂಕ: 30.12.2000 ರಂದು ಈ ಪ್ರಾಧಿಕಾರವು ಆದೇಶ ನೀಡಿದ್ದು ಸದ್ರಿ ಆದೇಶದಂತೆ ಮದ್ಯವನ್ನು ವಿಲೇವಾರಿ ಮಾಡಲಾಗಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ 3 ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ ಹಾಗೂ ನಾಲ್ಕು ದಾಖಲೆಗಳನ್ನು ಗುರುತಿಸಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 12.5.2000 ರಂದು ವಾಹನ ಲಾರಿ ಸಂಖ್ಯೆ: ಸಿಆರ್‌ಎಕ್ಸ್-9259 ರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಲಾಗಿತ್ತೇ?

2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕರು ತಾವೆಂದೂ, ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?

3) ಜಪ್ತು ಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದೂ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-1:**

ಶ್ರೀ ಜಿ.ಕೆ. ಸುಬ್ರಮಣ್ಯ, ನಿವೃತ್ತ ಅಬಕಾರಿ ನಿರೀಕ್ಷಕರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 20.3.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ದಿನಾಂಕ: 12.5.2000 ರಂದು ಬೆಳಗ್ಗಿನ ಜಾವ ಅಬಕಾರಿ ಉಪ ಅಧೀಕ್ಷಕರ ನೇತೃತ್ವದಲ್ಲಿ ಮಂಗಳೂರು ಕದ್ರಿ ದೂರವಾಣಿ ಕಟ್ಟಡದ ಮುಂಭಾಗ ರಾಷ್ಟ್ರೀಯ ಹೆದ್ದಾರಿಯಲ್ಲಿ ಶಂಕಿತ ವಾಹನಗಳನ್ನು ತಪಾಸಣೆ ಮಾಡುತ್ತಿದ್ದ ಸಮಯ ಸುಮಾರು 5-00 ಗಂಟೆಯ ಸಮಯಕ್ಕೆ ತಕ್ಷೀರಿನಲ್ಲಿ ವಶಪಡಿಸಿಕೊಳ್ಳಲಾದ ಲಾರಿ ಸಂಖ್ಯೆ: ಸಿಆರ್‌ಎಕ್ಸ್:9259 ನಂತೂರು ಕಡೆಯಿಂದ ಕೂಳೂರು ಕಡೆಗೆ ಸರಕು ಹೇರಿಕೊಂಡು ಬರುತ್ತಿದ್ದು ಅನುಮಾನದಿಂದ ಲಾರಿಯನ್ನು ನಿಲ್ಲಿಸಿ ಲಾರಿಯಲ್ಲಿದ್ದ ಸರಕಿನ ಬಗ್ಗೆ ಚಾಲಕನಲ್ಲಿ ವಿಚಾರಿಸಲಾಗಿ ಚೆರಿ ಕಾಫಿ ಎಂದು ತಿಳಿಸಿ ಸಂಬಂಧಪಟ್ಟ ಇನ್‌ವಾಯ್ಸ್‌ನ್ನು ಹಾಜರು ಪಡಿಸಿದನು. ಸದ್ರಿ ಇನ್‌ವಾಯ್ಸ್‌ಗಳನ್ನು ಪರಿಶೀಲನೆ ಮಾಡಲು ಇನ್‌ವಾಯ್ಸ್ ಸಂಖ್ಯೆ:41 ಮತ್ತು 42 ಆಗಿದ್ದು ರಶೀದಿ ಸಂಖ್ಯೆ: 41 ರಲ್ಲಿ ಜಿ.ಆರ್. ರಾಮೇಸ್ವಾಮಿ, ಬಸವೇಶ್ವರ ಎಸ್ಟೇಟ್, ಮಾಲಸಮರ ಅಂಚೆ ಇಲ್ಲಿಂದ ಲಾಂಗ್ ವೇ ಟ್ರೇಡಿಂಗ್ ಹೈಲ್ಯಾಂಡ್ ಕಾಫಿ ವರ್ಕ್ಸ್ ಎಂದೂ ರಶೀದಿ ಸಂಖ್ಯೆ:42 ರಲ್ಲಿ ಡಿ.ಟಿ. ಸುಬ್ಬಣ್ಣ ಹಳ್ಳಿಬೈಲ್ ಎಸ್ಟೇಟ್ ಆನೆಮಹಲ್ ಇಲ್ಲಿಂದ ಲಾಂಗ್ ವೇ ಟ್ರೇಡಿಂಗ್ ಕಾಫಿ ವರ್ಕ್ಸ್ ಮಂಗಳೂರು ಎಂದು ಬರೆದಿತ್ತು. ಈ 2 ರಶೀದಿ ಪ್ರಕಾರ 52 ಕೆ.ಜಿ.ಯ 182 ಚೀಲ ಚೆರಿ ಕಾಫಿಯನ್ನು ಸಾಗಿಸುವುದಾಗಿ ನಮೂದಿಸಿತ್ತು. ಆದರೆ ಲಾರಿಯ ಒಳಗಿನಿಂದ ಮದ್ಯದ ಘಾಟು ವಾಸನೆ ಬರುತ್ತಿತ್ತು. ಲಾರಿಯ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿಯು ಅನುಮಾನಾಸ್ಪದ ರೀತಿಯಲ್ಲಿ ವರ್ತಿಸುತ್ತಿದ್ದು, ಅನುಮಾನಗೊಂಡು ಸದ್ರಿ ಲಾರಿಯನ್ನು ವಿವರವಾಗಿ ತಪಾಸಣೆ ಮಾಡಲು ತೀರ್ಮಾನಿಸಿ ಚಾಲಕನಿಗೆ ಸರಕಿಗೆ ಹೊದಿಸಿದ್ದ ಟರ್ಪಾಲನ್ನು ತೆಗೆಯಲು ಸೂಚಿಸಲು, ಟರ್ಪಾಲಿಗೆ ಬಿಗಿದಿದ್ದ ಹಗ್ಗವನ್ನು ಬಿಚ್ಚುತ್ತಿದ್ದರು. ಅಷ್ಟರಲ್ಲಿ ದೊರೆತ ಸಾಕ್ಷೇತರರನ್ನು ಲಾರಿಯ ಶೋಧನೆಗೆ ಸಹಕರಿಸಬೇಕೆಂದು ಕೇಳಿ ಲಾರಿಯ ಶೋಧನೆಗೆ ನ್ಯಾಯಾಲಯದಿಂದ ವಾರಂಟನ್ನು ಪಡೆಯಲು ಕಾಲಾವಕಾಶವಿಲ್ಲದ್ದರಿಂದ ಸರ್ಚ್ ಮೆಮೋ ತಯಾರಿಸಲು ವ್ಯವಸ್ಥೆ ಮಾಡುತ್ತಿರುವಾಗ ಚಾಲಕ ಮತ್ತು ಕ್ಲೀನರ್ ಅಲ್ಲಿಂದ ಓಡಿ ಹೋದರು. ನಂತರ ಸರ್ಚ್ ಮೆಮೋವನ್ನು ತಯಾರಿಸಿ ಪಂಚರ ಸಮಕ್ಷಮ ಸರಕಿಗೆ ಮುಚ್ಚಿದ್ದ ಟರ್ಪಾಲನ್ನು ತೆಗೆಯಲು ಮೇಲ್ಗಡೆ ಚೆರಿ ಕಾಫಿ ತುಂಬಿದ ಚೀಲಗಳು, ಚೀಲಗಳ ಕೆಳಗೆ ಮದ್ಯ ಬಾಟ್ಲಿಗಳು ತುಂಬಿದ್ದ ರಟ್ಟಿನ ಪೆಟ್ಟಿಗೆಗಳು ಕಂಡು ಬಂದಿದ್ದು, ಕಾಫಿ ಚೀಲಗಳ ಕೆಳಗಡೆ ಮದ್ಯವನ್ನು ಕಳ್ಳ ಸಾಗಣೆ ಮಾಡುವುದು ಖಾತ್ರಿಯಾಯಿತು. ಲಾರಿಯ ಕ್ಯಾಬಿನನ್ನು ಪರಿಶೋಧಿಸಲು ಯಾವುದೇ ರಹದಾರಿ ಇರಲಿಲ್ಲ. ನಂತರ ಲಾರಿಯಲ್ಲಿದ್ದ ಕಾಫಿ ಮತ್ತು ಮದ್ಯದ ವಿವರಗಳನ್ನು ನೋಡಲಾಗಿ ಅಂದಾಜು 50 ಕೆ.ಜಿ.ಯ 70 ಕಾಫಿ ಚೀಲಗಳು, ಸದ್ರಿ ಗೋಣಿಚೀಲಗಳ ಕೆಳಗೆ 431 ಮದ್ಯದ ಸೀಸೆ ತುಂಬಿದ ಪೆಟ್ಟಿಗೆಗಳು ಕಂಡು ಬಂದವು. ಮದ್ಯದ ವಿವರ ಈ ಕೆಳಗಿನಂತೆ ಇರುತ್ತದೆ.

| | | | | |
|---|---|---|---|---|
| 1. | ಬ್ಯಾಗ್ ಪೈಪರ್ ವಿಸ್ಕಿ | 750 ಎಂ.ಎಲ್. | 12 ಶೀಷೆಗಳು | 270 ಪೆಟ್ಟಿಗೆಗಳು |
| 2. | ಬ್ಯಾಗ್ ಪೈಪರ್ ವಿಸ್ಕಿ | 180 ಎಂ.ಎಲ್. | 48 ಶೀಷೆಗಳು | 34 ಪೆಟ್ಟಿಗೆಗಳು |
| 3. | ಬ್ಯಾಗ್ ಪೈಪರ್ ಗೋಲ್ಡ್ ವಿಸ್ಕಿ | 750 ಎಂ.ಎಲ್. | 12 ಶೀಷೆಗಳು | 25 ಪೆಟ್ಟಿಗೆಗಳು |
| 4. | ಮೆಕ್‌ಡೊವೆಲ್ ವಿಸ್ಕಿ | 750 ಎಂ.ಎಲ್. | 12 ಶೀಷೆಗಳು | 15 ಪೆಟ್ಟಿಗೆಗಳು |
| 5. | ಮೆಕ್‌ಡೊವೆಲ್ ವಿಸ್ಕಿ | 375 ಎಂ.ಎಲ್. | 24 ಶೀಷೆಗಳು | 17 ಪೆಟ್ಟಿಗೆಗಳು |
| 6. | ಮೆಕ್‌ಡೊವೆಲ್ ವಿಸ್ಕಿ | 180 ಎಂ.ಎಲ್. | 48 ಶೀಷೆಗಳು | 55 ಪೆಟ್ಟಿಗೆಗಳು |
| 7. | ಮೆಕ್‌ಡೊವೆಲ್ ಬ್ರಾಂಡಿ | 750 ಎಂ.ಎಲ್. | 12 ಶೀಷೆಗಳು | 6 ಪೆಟ್ಟಿಗೆಗಳು |
| 8. | ಮೆಕ್‌ಡೊವೆಲ್ ಬ್ರಾಂಡಿ | 180 ಎಂ.ಎಲ್. | 48 ಶೀಷೆಗಳು | 10 ಪೆಟ್ಟಿಗೆಗಳು |
| | **ಒಟ್ಟು** | | | **431 ಪೆಟ್ಟಿಗೆಗಳು** |

ರಹದಾರಿ ಪತ್ರಗಳು ಇಲ್ಲದೆ ಮದ್ಯ ಸಾಗಿಸುವುದು ರಾಜ್ಯ ಅಬಕಾರಿ ಕಾಯ್ದೆಗೆ ವಿರೋಧವೆಂದು ಪಂಚರಿಗೆ ತಿಳಿಸಿ ನಂತರ ಲಾರಿಯಲ್ಲಿದ್ದ 270 ಬ್ಯಾಗ್ ಪೈಪರ್ ವಿಸ್ಕಿಯಿಂದ ಮೂರು 750 ಮಿಲಿಯ ಶೀಷೆಗಳನ್ನು ಮತ್ತು ಉಳಿದ ಮದ್ಯದಿಂದ ತರಹವಾರು, ಗಾತ್ರವಾರು ಒಂದೊಂದು ಶೀಷೆಯನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಅವುಗಳಿಗೆ ಇಲಾಖೆಯ ಮೊಹರು ಮಾಡಿ ಸದ್ರಿ ಶೀಷೆಗಳಿಗೆ ಗುರುತಿನ ಚೀಟಿಗಳನ್ನು ಹಚ್ಚಲಾಯಿತು. ಸದ್ರಿ ಲಾರಿಯಲ್ಲಿದ್ದ ಮದ್ಯದ ಶೀಷೆಗಳ ಮೇಲೆ ಮದ್ಯ ತಯಾರಾದ ಡಿಸ್ಟಿಲರಿ, ಮದ್ಯದ ಪ್ರಮಾಣ, ಸಾಂದ್ರತೆ, ಮದ್ಯದ ಹೆಸರು ಮತ್ತು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಮಾತ್ರ ಎಂದು ಚೀಟಿಗಳನ್ನು ಹಚ್ಚಲಾಗಿತ್ತು. ಲಾರಿ ಸಂಖ್ಯೆ: ಸಿಆರ್‌ಎಕ್ಸ್-9259 ಎಂದು ಬರೆದಿದ್ದು, ಮುಕ್ಕಾಲು ಭಾಗ ಕಂದು ಬಣ್ಣದಿಂದ ಕೂಡಿದ್ದು, ಉಳಿದ ಕಾಲು ಭಾಗ ತಿಳಿ ನೀಲಿ ಬಣ್ಣದಿಂದ ಕೂಡಿತ್ತು. ಲಾರಿಯ ಮುಂಭಾಗದ ಮೇಲೆ ಸೆಂಟ್ ಸೆಬೆಸ್ಟಿಯನ್ ಗೂಡ್ಸ್ ಕ್ಯಾರಿಯರ್ ಎಂದು ಇಂಗ್ಲೀಷಿನಲ್ಲಿ ಬರೆದಿತ್ತು. ಲಾರಿಯು ಟಾಟಾ ಕಂಪೆನಿ ನಿರ್ಮಿತ 1210 ಲಾರಿಯಾಗಿರುತ್ತದೆ. ಇದರ ಇಂಜಿನ್ ಸಂಖ್ಯೆ: ಇ-285278 ಇದ್ದು, ಚಾಸೀಸ್ ಸಂಖ್ಯೆ ಸ್ಪಷ್ಟವಾಗಿ ಕಂಡು ಬಂದಿರುವುದಿಲ್ಲ, ಹಾಗೂ ಓಡಿ ಹೋದ ಆರೋಪಿಗಳ ವಿವರ ದೊರೆತಿರುವುದಿಲ್ಲ. ಸ್ಥಳದಲ್ಲಿಯೇ ಮಹಜರು ತಯಾರಿಸಿರುತ್ತೇನೆ. ಅದಕ್ಕೆ ಪಂಚರ ಸಹಿಯನ್ನು ಪಡೆದಿರುತ್ತೇನೆ. ಸ್ಥಳದಲ್ಲಿಯೇ ಮೊಹರಿನ ನಮೂನೆಯನ್ನು ತಯಾರಿಸಿರುತ್ತೇನೆ. ನಂತರ ದೊರೆತ ಸೊತ್ತುಗಳನ್ನು ಲಾರಿಯ ಸಮೇತ ಮುಂದಿನ ತನಿಖೆಯ ಬಗ್ಗೆ ಇಲಾಖಾ ವಶಕ್ಕೆ ತೆಗೆದುಕೊಂಡು ಕಛೇರಿಗೆ ಬಂದು ತಕ್ಷೀರನ್ನು ದಾಖಲಿಸಿ, ಈ ತಕ್ಷೀರಿಗೆ ಸಂಬಂಧಪಟ್ಟ ಮೂಲ ದಾಖಲೆಗಳನ್ನು ನ್ಯಾಯಾಲಯಕ್ಕೆ ಹಾಗೂ ಪ್ರಥಮ ಮಾಹಿತಿ ವರದಿ ಯಾ ವಸ್ತು ಹಾಗೂ ಸ್ವತ್ತುಗಳ ಪಟ್ಟಿಯನ್ನು ಪ್ರಾಧಿಕಾರಕ್ಕೆ ಕಳುಹಿಸಿರುತ್ತೇನೆ. ನಂತರ ತಕ್ಷೀರಿಗೆ ಸಂಬಂಧಪಟ್ಟ ದಾಖಲಾತಿ ಹಾಗೂ ಸ್ವತ್ತುಗಳನ್ನು ಕುಲಶೇಖರ ವಲಯ ನಿರೀಕ್ಷಕರಿಗೆ ದಿನಾಂಕ: 17.5.2000 ರಂದು ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪ್ರಕರಣದ ಮೂಲ ದಾಖಲೆಗಳು ನ್ಯಾಯಾಲಯದಲ್ಲಿದ್ದು, ಅವುಗಳ ಪ್ರತಿಗಳನ್ನು ಗುರುತಿಸಿದೆನು. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ-1 ಎಂದೂ ಮಹಜರು ಪ್ರತಿಯನ್ನು ನಿಶಾನೆ ಪಿ-2 ಎಂದೂ ಹಾಗೂ ವಸ್ತುಗಳ ಪಟ್ಟಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಆ ದಿನ ಯಾವುದೇ ಖಚಿತ ವರ್ತಮಾನವಿರಲಿಲ್ಲ. ತಕ್ಷೀರು ಸ್ಥಳವು ನಮ್ಮ ಕಛೇರಿಯಿಂದ 2 ಕಿ.ಮೀ. ದೂರದಲ್ಲಿದೆ. ಬೆಳಿಗ್ಗೆ 4.00 ಗಂಟೆಗೆ ಕಛೇರಿಯಿಂದ ಹೊರಟಿದ್ದೆವು. ಈ ಲಾರಿ ಬರುವ ಮೊದಲು 5, 6 ವಾಹನಗಳನ್ನು ನಿಲ್ಲಿಸಿ ಪರಿಶೀಲಿಸಿದ್ದೇವೆ. ಸದ್ರಿ ವಾಹನವನ್ನು ಪ್ರಥಮವಾಗಿ ನಾನು ನೋಡಿರುತ್ತೇನೆ. ಸ್ವತಂತ್ರ ಸಾಕ್ಷಿ ರಿಕ್ಷಾ ಚಾಲಕನಾಗಿರುತ್ತಾನೆ. ಲಾರಿಯನ್ನು ನಿಲ್ಲಿಸಿ 2, 3 ನಿಮಿಷಗಳ ನಂತರ ಸಾಕ್ಷಿಯನ್ನು ಪಡೆದಿರುತ್ತೇವೆ. ಆ ದಿನ ನಾವು ಕದ್ರಿ ದೂರವಾಣಿಯ ಎದುರು ನಿಂತಿದ್ದೆವು. ದೂರವಾಣಿ ಕೇಂದ್ರದಲ್ಲಿ ರಾತ್ರಿ ಕಾವಲುಗಾರನಿರುವ ಬಗ್ಗೆ ಗಮನಿಸಿರುವುದಿಲ್ಲ. ಲಾರಿಯನ್ನು ನಿಲ್ಲಿಸಿದ 10 ನಿಮಿಷಗಳ ನಂತರ ಲಾರಿಯ ಡ್ರೈವರ್ ಮತ್ತು ಕ್ಲೀನರ್ ತಪ್ಪಿಸಿರುತ್ತಾರೆ. ಅವರನ್ನು ಹಿಡಿಯಲು ಪ್ರಯತ್ನಿಸಿದ್ದೇವೆ. ದೂರವಾಣಿ ಕೇಂದ್ರದ ಹತ್ತಿರ 5 ಗಂಟೆಯ ಹೊತ್ತಿಗೆ ವಾಹನಗಳು ಓಡಾಡುತ್ತವೆ ಎಂದರೆ ಸರಿ. ನಿಶಾನೆ ಪಿ-2 ಮಹಜರನ್ನು ತಾನೇ ಬರೆದಿರುವುದಾಗಿ ಹಾಗೂ ಚೆಕ್ಕು ಬಂದಿಯನ್ನು ನಮೂದಿಸಿರುವುದಿಲ್ಲ. ರಿಕ್ಷಾ ಡ್ರೈವರ್ ಬಿಟ್ಟು ಬೇರೆ ಯಾರೂ ಸಾಕ್ಷಿ ಸಿಗದ ಕಾರಣ ಬೇರೆ ಸಾಕ್ಷಿಯನ್ನು ಪಡೆದಿಲ್ಲ. ಆ ದಿನ ಗಸ್ತಿಗೆ ಹೋದದ್ದಿಲ್ಲ. ಕದ್ರಿ ದೂರವಾಣಿ ಕೇಂದ್ರದ ಎದುರಿನಲ್ಲಿ ಯಾವುದೇ ಲಾರಿಯನ್ನು ವಶಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ಈ ವಾಹನಕ್ಕೂ ಹಾಗೂ ಮದ್ಯಕ್ಕೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ. ಲೆಕ್ಕ ಭರ್ತಿಗೋಸ್ಕರ ಈ ಲಾರಿಯನ್ನು ವಶಪಡಿಸಿಕೊಂಡಿದ್ದು ಎಂದರೆ ಸರಿಯಲ್ಲ. ನಿಶಾನೆ ಪಿ-1 ಮತ್ತು ಸಾಕ್ಷಿದಾರರು ಪ್ರಕರಣದ ಸಿ.ಪಿ.2ಕ್ಕೆ ಪೂರಕವಾಗಿ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ 2ನ್ನು ತನ್ನ ಕಛೇರಿಯಲ್ಲಿ ಈ ಕೇಸಿಗೋಸ್ಕರ ತಯಾರಿಸಿದ್ದು ಎಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಲ್ಲಿ ಅರ್ಜಿದಾರರಿಗೆ ಯಾವುದೇ ಪ್ರಯೋಜನ ಆಗಿರುವುದಿಲ್ಲ.

**ಪ್ರಾ.ಸಾ-2:**

ಶ್ರೀ ಹರೀಶ್ ಕುಮಾರ್, ಅಬಕಾರಿ ರಕ್ಷಕ ಇವರು ದಿನಾಂಕ: 20.3.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ಈ ಕೇಸಿಗೆ ಸಂಬಂಧಪಟ್ಟ 10 ಬಾಟ್ಲಿ ಮಾದರಿ ಶೀಷೆಗಳನ್ನು, ಅದಕ್ಕೆ ಸಂಬಂಧಿಸಿದ ಕೋರಿಕೆ ಪತ್ರವನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಂದ ಪಡೆದೆನು. ದಿನಾಂಕ: 27.6.2000 ರಂದು ಮಂಗಳೂರು ರಾಸಾಯನಿಕ ವಿಶ್ಲೇಷಕರಿಗೆ ತಲುಪಿಸಿದೆನು. ದಿನಾಂಕ: 22.7.2000 ರಂದು ರಾಸಾಯನಿಕ ವರದಿಯನ್ನು ಹಾಗೂ ಮಾದರಿ ಶೀಷೆಗಳನ್ನು ಕುಲಶೇಖರ ವಲಯ ನಿರೀಕ್ಷಕರಿಗೆ ತಲುಪಿಸಿದೆನು. ಈ ಪ್ರಕರಣದ ರಾಸಾಯನಿಕ ವಿಶ್ಲೇಷಕರ ವರದಿಯ ಛಾಯಾ ಪ್ರತಿಯನ್ನು ನೋಡಿ ಗುರುತಿಸಿರುತ್ತಾರೆ. ಈ ಪ್ರತಿಯನ್ನು ಎದುರುದಾರರ ಆಕ್ಷೇಪಣೆಯ ಮೇರೆಗೆ ನಿಶಾನೆ ಪಿ-4 ಎಂದು ಗುರುತಿಸಲಾಯಿತು ಎಂದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

**ಪ್ರಾ.ಸಾ-3:**

ಈ ಪ್ರಕರಣದ ತನಿಖಾಧಿಕಾರಿಗಳಾದ ಶ್ರೀ ಅಜೀಜ್ ಪೆರ್ಮನ್ನೂರು ಇವರು ದಿನಾಂಕ: 10.7.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆ ಪತ್ರ, ಮಾದರಿ ಸೀಲ್ ಹಾಗೂ ಸ್ವತ್ತುಗಳನ್ನು ದಿನಾಂಕ: 17.5.2000 ರಂದು ಪಡೆದುಕೊಂಡಿರುತ್ತೇನೆ. ದಿನಾಂಕ: 27.6.2000 ರಂದು ಕೋರಿಕೆ ಪತ್ರದೊಂದಿಗೆ ರಾಸಾಯನಿಕ ವಿಶ್ಲೇಷಣೆಗಾಗಿ ಕಛೇರಿಯ ಅಬಕಾರಿ ರಕ್ಷಕ ಶ್ರೀ ಹರೀಶ್ ಕುಮಾರ್ ಇವರ ಮೂಲಕ ಕಳುಹಿಸಿರುತ್ತೇನೆ. ದಿನಾಂಕ: 27.7.2000 ರಂದು ರಾಸಾಯನಿಕ ವಿಶ್ಲೇಷಣಾ ವರದಿ ಹಾಗೂ ವಿಶ್ಲೇಷಿತ ಮಾದರಿ ಶೀಷೆಗಳನ್ನು ಪಡೆದಿರುತ್ತೇನೆ. ದಿನಾಂಕ: 17.8.2000 ರಂದು ಅಧಿಕೃತ ಅಧಿಕಾರಿಗಳ ಆದೇಶ ಸಂಖ್ಯೆ: ಎಸ್‌ಡಿಕೆ:551:ಡಿಟಿಸಿಆರ್:1999-2000ರ ರೀತ್ಯಾ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನ ಹಾಗೂ 70 ಚೀಲ ಕಾಫಿ ಚೆರಿಯನ್ನು ವಾಹನ ಮಾಲೀಕರಾದ ಶ್ರೀ ನಾರಾಯಣ ಮೂರ್ತಿಯವರಿಗೆ ತಾತ್ಕಾಲಿಕ ನೆಲೆಯಲ್ಲಿ ನೀಡಲಾಗಿದೆ. ಈ ಪ್ರಕರಣದಲ್ಲಿ ರಾಸಾಯನಿಕ ವಿಶ್ಲೇಷಕರ ವರದಿಯನ್ನು ಹಾಜರು ಪಡಿಸಿರುತ್ತೇನೆ. ಸದ್ರಿ ವರದಿಯನ್ನು ಈಗಾಗಲೇ ನಿಶಾನೆ ಪಿ-4 ಎಂದು ಗುರುತಿಸಲಾಗಿದೆ. ತಜ್ಞರ ವರದಿಯಂತೆ ಸದ್ರಿ ಮದ್ಯವು ಮಾನವನ ಸೇವನೆಗೆ ಯೋಗ್ಯವಾಗಿದೆ ಎಂದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ತಕ್ಷೀರಿನಲ್ಲಿ ತಾನು ತನಿಖಾಧಿಕಾರಿ, ಪ್ರಕರಣದ ಆರೋಪಿತರನ್ನು ಪತ್ತೆ ಮಾಡಲು ಪ್ರಯತ್ನ ಮಾಡಿರುತ್ತೇನೆ. ಈ ಪ್ರಕರಣದ ದೋಷಾರೋಪವಾಗಿ ಪಟ್ಟಿಯನ್ನು ಸಲ್ಲಿಸಿರುವುದಿಲ್ಲ. ರಾಸಾಯನಿಕ ತಜ್ಞರಿಗೆ ಒಟ್ಟು 10 ಮಾದರಿ ಶೀಷೆಗಳನ್ನು ಕಳುಹಿಸಿರುತ್ತೇನೆ. ಪ್ರಾ.ಸಾ.1 ಇವರು ವಹಿಸಿಕೊಟ್ಟ ಮಾದರಿ ಶೀಷೆಗಳನ್ನು ತಜ್ಞರಿಗೆ ಕಳುಹಿಸಿರುತ್ತೇನೆ. ಈ ಪ್ರಕರಣದಲ್ಲಿ ವಾಹನ ಮಾಲೀಕರು ಭಾಗಿಯಾಗಿರುತ್ತಾರೆ ಎಂಬುದಕ್ಕೆ ಯಾವುದೇ ಸಾಕ್ಷಿಯನ್ನು ಹಾಜರು ಪಡಿಸಿಲ್ಲವೆಂದರೆ ಹಾಗೂ ಈ ತಕ್ಷೀರಿನ ಬಗ್ಗೆ ಸರಿಯಾಗಿ ತನಿಖೆ ಮಾಡಿಲ್ಲವೆಂದರೆ ಸರಿಯಲ್ಲ. ತಾನು ತನಿಖೆ ಮಾಡದೇ ಇದ್ದುದರಿಂದ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿಲ್ಲವೆಂದರೆ ಸರಿಯಲ್ಲ. ಮತ್ತು ತಕ್ಷೀರಿಗೂ ವಶಪಡಿಸಿಕೊಂಡಿರುವ ವಾಹನಕ್ಕೂ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲ ಎಂದು ತಮ್ಮ ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದಲೂ ಅರ್ಜಿದಾರರಿಗೆ ಯಾವುದೇ ಪ್ರಯೋಜನ ಆಗಿರುವುದಿಲ್ಲ.

ಈ ಮೇಲಿನ ಸಾಕ್ಷಿದಾರರ ಹೇಳಿಕೆ ಹಾಗೂ ಲಭ್ಯವಿರುವ ದಾಖಲಾತಿಗಳ ಪರಿಶೀಲನೆಯಿಂದ ದಿನಾಂಕ: 12.5.2000 ರಂದು ವಾಹನ ಲಾರಿ ಸಂಖ್ಯೆ: ಸಿಆರ್‌ಎಕ್ಸ್-9259 ರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ನಿಜವೆಂದು ಕಂಡು ಬರುತ್ತದೆ. ಈ ಕಾರಣದಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು ಪರಿಗಣಿಸಲಾಗಿದೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದಲ್ಲಿ ತನ್ನ ತಿಳುವಳಿಕೆಗೆ ಬಾರದೇ ಈ ಅಕ್ರಮ ಕೃತ್ಯವು ನಡೆದಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಕರ್ತವ್ಯ ಹಾಗೂ ಜವಾಬ್ದಾರಿಯಾಗಿದ್ದು. ಈವರೆಗೆ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಈ ಪ್ರಾಧಿಕಾರವು 6 ಬಾರಿ ನೋಟೀಸು ನೀಡಿದ್ದರೂ, ನೀಡಲಾಗಿರುವ ನೋಟೀಸು ಸ್ವೀಕೃತಗೊಳ್ಳದೆ ಹಿಂದೆ ಬಂದಿದ್ದು ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಈ ಅಕ್ರಮ ಕೃತ್ಯವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆಯೆಂದು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಸದ್ರಿ ಪ್ರಕರಣದ ಅರ್ಜಿದಾರರ ಪರ ವಕೀಲರು ವಾಹನ ಮಾಲೀಕರ ಪರ ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ಸಮಯಾವಕಾಶವನ್ನು ಕೋರಿದ್ದು, ಈ ಪ್ರಾಧಿಕಾರವು ಕೆಲವಾರು ಅವಕಾಶಗಳನ್ನು ನೀಡಿದ್ದರೂ ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣ ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂದೂ ಈ ಪ್ರಾಧಿಕಾರವು ನಂಬಲೇ ಬೇಕಾಗುತ್ತದೆ. ಆದುದರಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದು ಪರಿಗಣಿಸಲಾಗಿದೆ.

ಮೇಲ್ಕಾಣಿಸಿದ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಸ್ವತ್ತುಗಳಾದ 70 ಚೀಲ ಚೆರಿ ಕಾಫಿ ಹಾಗೂ ವಾಹನದ ಪೈಕಿ ಚೆರಿ ಕಾಫಿಯು ಅಬಕಾರಿ ವಸ್ತುಗಳ ಪರಿಮಿತಿಯಲ್ಲಿ ಬಾರದೇ ಇರುವುದರಿಂದ 70 ಚೀಲ ಚೆರಿ ಕಾಫಿಯನ್ನು ಹೊರತುಪಡಿಸಿ ವಾಹನ ಲಾರಿ ಸಂಖ್ಯೆ: ಸಿಆರ್‌ಎಕ್ಸ್-9259ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:551:ಡಿಟಿಸಿಆರ್:1999-2000, ದಿನಾಂಕ: 13ನೇ ಮೇ 2004**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ನಿರೀಕ್ಷಕರು, ನಂ.3 ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರು ದಾಖಲು ಮಾಡಿದ ಮೊಕದ್ದಮೆ ಸಂಖ್ಯೆ: 37/1999-2000 ದಿನಾಂಕ: 12.05.2000 ರಲ್ಲಿ ಜಪ್ತು ಪಡಿಸಲಾಗಿರುವ ವಾಹನ ಟಾಟಾ ಲಾರಿ ಸಂಖ್ಯೆ: ಸಿಆರ್‌ಎಕ್ಸ್-9259ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 13.05.2004 ರಂದು ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:

ಪ್ರಾ.ಸಾ:1 - ಶ್ರೀ ಜಿ.ಕೆ. ಸುಬ್ರಮ್ಮಣ್ಯ ಅಬಕಾರಿ ನಿರೀಕ್ಷಕರು, (ನಿವೃತ್ತ)

ಪ್ರಾ.ಸಾ:2 - ಶ್ರೀ ಹರೀಶ್ ಕುಮಾರ್, ಅಬಕಾರಿ ರಕ್ಷಕ, ಕುಲಶೇಖರ ವಲಯ.

ಪ್ರಾ.ಸಾ:3 - ಶ್ರೀ ಅಜೀಜ್ ಪೆರ್ಮನ್ನೂರು, ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ.

**ಅನುಬಂಧ-2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:

ನಿಶಾನೆ ಪಿ-1 - ಪ್ರಥಮ ಮಾಹಿತಿ ವರದಿ ಪ್ರತಿ

ನಿಶಾನೆ ಪಿ-2 - ಮಹಜರು

ನಿಶಾನೆ ಪಿ-3 - ಸೊತ್ತುಗಳ ವರದಿ

ನಿಶಾನೆ ಪಿ-4 - ರಾಸಾಯನಿಕ ವರದಿಯ ಪ್ರತಿ

ಅನುಬಂಧ-3

ವಾಹನ ಮಾಲೀಕರ ಪರ ಮಂಡಿಸಲಾದ ಸಾಕ್ಷಿಗಳು: ಇಲ್ಲಾ

**ಗೋವಿಂದಪ್ಪ**

ಪಿ.ಆರ್. 723 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಜಿಲ್ಲಾ ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

**ಪ್ರಕಟಣೆ ಸಂಖ್ಯೆ: ಬಿಸಿಎಂ/ವಿವಿಬಿ/ಸಿಆರ್/7/2004-2005, ದಿನಾಂಕ: 14ನೇ ಮೇ 2004**

**ವಿಷಯ:** 2004-05ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ಯೋಜನೆಯಂತೆ ಅರ್ಜಿ ಆಹ್ವಾನಿಸುವ ಕುರಿತು.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂ 60 ಎಸ್.ಇ.ಡಬ್ಲ್ಯೂ:89, ಬೆಂಗಳೂರು, ದಿನಾಂಕ: 02.11.1990.

ಉಲ್ಲೇಖದ ಸರ್ಕಾರಿ ಆದೇಶದಂತೆ 2004-05ನೇ ಸಾಲಿಗೆ ಉಡುಪಿ ಜಿಲ್ಲೆಯ ಹಿಂದುಳಿದ ವರ್ಗಗಳಿಗೆ (ವರ್ಗ-1, 2ಎ, 2ಬಿ, 3ಎ, 3ಬಿ) ಸೇರಿದ ಅರ್ಹ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡುವ ಯೋಜನೆಯಂತೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು**

1. ತರಬೇತಿ ಪಡೆಯಲು ಅಭ್ಯರ್ಥಿಗಳು ಹಿಂದುಳಿದ ವರ್ಗಗಳ ಜಾತಿಗೆ ಸೇರಿರಬೇಕು. ಇವರ ವಾರ್ಷಿಕ ಆದಾಯ ರೂ.15,000/- ಕ್ಕಿಂತ ಮೀರಿರಬಾರದು. ಈ ಬಗ್ಗೆ ಸಂಬಂಧಪಟ್ಟ ತಹಶೀಲ್ದಾರರಿಂದ ಜಾತಿ / ಆದಾಯ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಸಲ್ಲಿಸುವುದು.
2. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಗರಿಷ್ಠ 30 ವರ್ಷಗಳ ವಯೋಮಿತಿಯಲ್ಲಿರಬೇಕು.
3. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದ ಎರಡು ವರ್ಷದೊಳಗೆ ಅಭ್ಯರ್ಥಿಯು ಕಾನೂನು ಪದವಿಯನ್ನು ಪಡೆದಿರಬೇಕು.
4. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತನ್ನ ಹೆಸರನ್ನು ನೋಂದಾಯಿಸಿರಬೇಕು.
5. ತರಬೇತಿಯ ಅವಧಿ ನಾಲ್ಕು ವರ್ಷವಾಗಿದ್ದು ಮಾಹೆಯಾನ ರೂ.1,000/- ಶಿಷ್ಯವೇತನ ನೀಡಲಾಗುವುದು.

ಇಚ್ಛೆಯುಳ್ಳ ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬನ್ನಂಜೆ, ಉಡುಪಿ ಇವರಿಗೆ ದಿನಾಂಕ: 30.06.2004 ರೊಳಗೆ ಸಲ್ಲಿಸಬಹುದಾಗಿದೆ. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕಛೇರಿ ಸಮಯದಲ್ಲಿ ಪಡೆಯಬಹುದಾಗಿದೆ. ಕಛೇರಿ ದೂರವಾಣಿ ಸಂಖ್ಯೆ: 2531581.

ಜಿಲ್ಲಾ ಅಧಿಕಾರಿ,

ಪಿ.ಆರ್. 724 ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಉಡುಪಿ ಜಿಲ್ಲೆ.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಬಾಗೇಪಲ್ಲಿ ತಾಲ್ಲೂಕು ತೋಟದ ಬೆಳೆಗಾರರ ಮಾರಾಟ ಸಹಕಾರ ಸಂಘ ನಿ., ಕೋಲಾರ ಜಿಲ್ಲೆ ಇದರ ನೋಂದಣಿ ಸಂಖ್ಯೆ ರದ್ದುಪಡಿಸುವ ವಿಚಾರ.

**ಉಲ್ಲೇಖ:**
1. ಬೆಂಗಳೂರು ವಿಭಾಗೀಯ ಸಂಯುಕ್ತ ನಿಬಂಧಕರ ಆದೇಶ ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:23:1986-87, ದಿನಾಂಕ: 24.11.86.
2. ಉಪನಿಬಂಧಕರು, ಕೋಲಾರ ಇವರ ಪ್ರಸ್ತಾವನೆ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್-127:86-87, ದಿನಾಂಕ: 29.11.2003.
3. ಈ ಕಛೇರಿ ಪತ್ರಗಳ ಸಮಸಂಖ್ಯೆ ದಿನಾಂಕ: 23.12.2003 ಹಾಗೂ 12.2.2004.
4. ಸ.ಸಂ. ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಇವರ ಪತ್ರ ಸಂ. ಸನಿ-48:ಯೋಜನೆ:ಯುಆರ್-185, ದಿನಾಂಕ: 2003-04.

**ಪ್ರಸ್ತಾವನೆ:**

ಬಾಗೇಪಲ್ಲಿ ತಾಲ್ಲೂಕು ತೋಟದ ಬೆಳೆಗಾರರ ಮಾರಾಟ ಸಹಕಾರ ಸಂಘ ನಿ., ಕೋಲಾರ ಜಿಲ್ಲೆ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಡಿಆರ್‌ಕೆ:ಎಲ್‌ಸಿ:67:1971-72, ದಿನಾಂಕ: 15.10.1971 ರಲ್ಲಿ ನೋಂದಣಿಯಾಗಿದ್ದು, ಇದನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ಬಾಗೇಪಲ್ಲಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಸಂಘದ ದಾಖಲಾತಿಗಳು ಸಂಘದ ಅಧ್ಯಕ್ಷರ ವಶದಲ್ಲಿದ್ದು, ಇವರು ಮೌತಿ ಹೊಂದಿದ್ದರಿಂದ, ಸಂಘದ ಲೆಕ್ಕಪತ್ರಗಳು, ಆಸ್ತಿಗಳ ವಿವರ, ದಾಖಲಾತಿಗಳು ದೊರಕದ ಪ್ರಯುಕ್ತ, ಸಮಾಪನಾಧಿಕಾರಿಯು ದಿನಾಂಕ: 16.2.2003 ರಂದು ಸ್ವಯಂ ಪ್ರಭಾರ ವಹಿಸಿಕೊಂಡಿರುತ್ತಾರೆ. ಸಂಘದ 30.6.1984ರ ಅಂತ್ಯಕ್ಕೆ ಲೆಕ್ಕಪರಿಶೋಧಿತ ಆಸ್ತಿ-ಜವಾಬ್ದಾರಿ ತಃಖ್ತೆ ಲಭ್ಯವಿದ್ದು, ಅದರ ಪ್ರಕಾರ ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿದ್ದು, ಉಲ್ಲೇಖ (2) ರಲ್ಲಿ ಉಪನಿಬಂಧಕರು, ಕೋಲಾರ ಇವರು ಸಂಘದ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿದ್ದಾರೆ.

ಪರಿಶೀಲಿಸಲಾಗಿ, ಸಮಾಪನಾಧಿಕಾರಿಯು ದಿನಾಂಕ: 16.2.2003 ರಲ್ಲಿ ಸಭೆ ನಡೆಸಿ, ಸಂಘದ ಆಸ್ತಿ-ಜವಾಬ್ದಾರಿಗಳನ್ನು ಹೊಂದಾಣಿಕೆ ಲೆಕ್ಕದ ಮುಖಾಂತರ ಶೂನ್ಯಗೊಳಿಸಲು ತೀರ್ಮಾನ ಕೈಗೊಂಡಿರುತ್ತಾರೆ. ಸಂಘದಲ್ಲಿ ಸರ್ಕಾರದ ವಿನಿಯೋಗಗಳು ಇರುವುದಿಲ್ಲ. ಆದ್ದರಿಂದ ಸಂಘದ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಹೊಂದಾಣಿಕೆ ಲೆಕ್ಕದ ಮುಖಾಂತರ ಶೂನ್ಯಗೊಳಿಸಿ ದಿನಾಂಕ: 28.3.2003ರ ಅಂತ್ಯಕ್ಕೆ ಶೂನ್ಯ ಅಡಾವೆಪತ್ರಿಕೆಯನ್ನು ತಯಾರಿಸಿ ಸಲ್ಲಿಸಿದ್ದಾರೆ. ಸಂಘದ ದಾಖಲಾತಿಗಳನ್ನು ವಶಪಡಿಸಿಕೊಳ್ಳಲು ಸರ್ವಪ್ರಯತ್ನ ನಡೆಸಿದ್ದು, ಯಾವ ಮಾಹಿತಿಯೂ ದೊರೆಯದ ಹಿನ್ನೆಲೆಯಲ್ಲಿ, ಸಂಘವು ಸಮಾಪನೆ ಸ್ಥಿತಿಯಲ್ಲಿ ಮುಂದುವರೆಸುವುದರಿಂದ ಯಾರಿಗೂ ಪ್ರಯೋಜನಕಾರಿಯಾಗದ ಹಿನ್ನೆಲೆಯಲ್ಲಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಬೇಕೆಂದು ಉಪನಿಬಂಧಕರು, ಕೋಲಾರ ಇವರು ಉಲ್ಲೇಖ (2) ರಲ್ಲಿ ಹಾಗೂ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಇವರು ಉಲ್ಲೇಖ (4) ರಲ್ಲಿ ಶಿಫಾರಸ್ಸು ಮಾಡಿದ್ದಾರೆ.

ಅವಲೋಕಿಸಲಾಗಿ, ಸಂಘವು ಸಮಾಪನೆಗೊಂಡು ಈಗಾಗಲೇ 15ಕ್ಕೂ ಹೆಚ್ಚು ವರ್ಷಗಳು ಗತಿಸಿದ್ದು, ಸಂಘದ ಬಗ್ಗೆ ಯಾವುದೇ ಮಾಹಿತಿಗಳು ದಾಖಲಾತಿಗಳು ಲಭ್ಯವಾಗದ ಕಾರಣ ಹಾಗೂ ಇದರಲ್ಲಿ ಸರ್ಕಾರದ ವಿನಿಯೋಗಗಳು ಯಾವುದೂ ಇಲ್ಲದ ಕಾರಣ ಸಂಘವನ್ನು ಸಮಾಪನಾವಸ್ಥೆಯಲ್ಲಿ ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವ ಪ್ರಯೋಜನವೂ ಇಲ್ಲವೆಂದು ಮನಗಂಡು, ಉಪನಿಬಂಧಕರು, ಕೋಲಾರ ಹಾಗೂ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸಿನನ್ವಯ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:23:ಎಲ್‌ಎಂಸಿ:1986-87, ದಿನಾಂಕ: 11ನೇ ಮೇ 2004**

ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001 ಹಾಗೂ ಸಿಎಂಡಬ್ಲ್ಯೂ 70 ಸಿಎಲ್‌ಎಂ 2003 ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಸವೇಗೌಡ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಬಾಗೇಪಲ್ಲಿ ತಾಲ್ಲೂಕು ತೋಟದ ಬೆಳೆಗಾರರ ಮಾರಾಟ ಸಹಕಾರ ಸಂಘ ನಿ., ಬಾಗೇಪಲ್ಲಿ, ಕೋಲಾರ ಜಿಲ್ಲೆ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಕೆ:ಎಲ್‌ಸಿ:67:1971-72, ದಿನಾಂಕ: 15.10.1971ನ್ನು ರದ್ದುಗೊಳಿಸಿ ಆದೇಶಿಸಿದ್ದೇನೆ.

ಈ ಆದೇಶವು ತಕ್ಷಣದಿಂದ ಜಾರಿಯಲ್ಲಿದ್ದು, ಆದೇಶದ ದಿನಾಂಕದಿಂದ ಸಂಘವು ಅಸ್ತಿತ್ವದಲ್ಲಿಲ್ಲವೆಂದೂ, ಸಂಪೂರ್ಣವಾಗಿ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು. ಸಂಘದ ಲಭ್ಯ ದಾಖಲಾತಿಗಳನ್ನು ನಿಯಮಾನುಸಾರ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ, ಇವರ ಕಾರ್ಯಾಲಯದಲ್ಲಿ 03 ವರ್ಷಗಳ ಕಾಲ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 11ನೇ ಮೇ 2004 ರಂದು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

ಬಸವೇಗೌಡ

ಪಿ.ಆರ್. 726 ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ.

**ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು, ರಾಜಾಜಿನಗರ, ಬೆಂಗಳೂರು, ಇವರ ಕಾರ್ಯಾಲಯದ ನಡವಳಿಗಳು**

**ವಿಷಯ:** ಶ್ರೀ ಆರ್.ಈ. ದಶರಥರಾಮ, ದೋಭಿ, ಗ್ರೂಪ್ ಡಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ಇವರು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ - ಇಲಾಖಾ ವಿಚಾರಣೆ - ಸೇವೆಯಿಂದ ತೆಗೆದು ಹಾಕುವ ಕುರಿತು ದಂಡನೆಯ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ವೈದ್ಯಕೀಯ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇವರ ಪತ್ರ ಕ್ರಮಾಂಕ: ಗ್ರೂಪ್-ಡಿ:85:2000-01, ದಿನಾಂಕ: 28.6.2000.
2) ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರ ಕ್ರಮಾಂಕ: ಇದೇ ಸಮ ಸಂಖ್ಯೆ ದಿನಾಂಕ: 21.10.2000.
3) ವೈದ್ಯಕೀಯ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ಇವರ ಪತ್ರ ಕ್ರಮಾಂಕ: ಡಿ ವರ್ಗ:148:2000-01.
4) ನಿರ್ದೇಶನಾಲಯದಿಂದ ಜಾರಿ ಮಾಡಿದ ನೋಟೀಸು : ದೋಷಾರೋಪಣೆ ಪಟ್ಟಿ : ಇದೇ ಸಮ ಸಂಖ್ಯೆ: ದಿನಾಂಕ: 12/15.3.2001.
5) ವೈದ್ಯಕೀಯ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ಇಂದಿರಾನಗರ ಬೆಂಗಳೂರು ಇವರ ಪತ್ರ ಕ್ರಮಾಂಕ: ದೂರು:ಇವಿ:24:2000-01, ದಿನಾಂಕ: 21.6.2001 ರೊಡನೆ ದಿನಾಂಕ: 14/20.6.2001 ರಂದು ಸದರಿ ನೌಕರರು ಸಲ್ಲಿಸಿದ್ದ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದಾರೆ.
6) ನಿರ್ದೇಶನಾಲಯದಿಂದ ಹೊರಡಿಸಿದ ಆದೇಶ ಇದೇ ಸಮ ಸಂಖ್ಯೆ ದಿನಾಂಕ: 21.9/22.10.2001.
7) ವಿಚಾರಣಾಧಿಕಾರಿಗಳು, ವಿಚಾರಣಾ ವರದಿ ಸಲ್ಲಿಕೆ ದಿನಾಂಕ: 11.4.2003.
8) 2ನೇ ಶೋಕಾಸ್ ನೋಟೀಸು ಹೊರಡಿಸಿದ ದಿನಾಂಕ: 20.8/11.9.2003.
9) ವೈದ್ಯಕೀಯ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ವಿಚಾರಣೆ: 09:2003-04, ದಿನಾಂಕ: 10.2.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಆರ್.ಈ. ದಶರಥರಾಮ, ಗ್ರೂಪ್ 'ಡಿ' ದೋಭಿ, ಇವರು ಕಾರ್ಮಿಕರ ರಾಜ್ಯ ವಿಮಾ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ಇಲ್ಲಿಯ ಕರ್ತವ್ಯದಿಂದ ದಿನಾಂಕ: 1.7.1999 ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದಾಗಿ ನಿರ್ದೇಶಕರವರ ಅನುಮತಿಯನ್ನು ಪಡೆದುಕೊಂಡು ಕರ್ತವ್ಯಕ್ಕೆ ಹಾಜರಾಗುವಂತೆ ಆದೇಶಿಸಿ ವೈದ್ಯಕೀಯ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ಇವರು ಅಧಿಕೃತ ಜ್ಞಾಪನಾ ಪತ್ರವನ್ನು ನೀಡಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಸದರಿ ನೌಕರರು ಸಲ್ಲಿಸಿದ ಮನವಿಯನ್ನು ಪರಿಗಣಿಸಿ ಮತ್ತು ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿಸಲಾಯಿತು, ಮೇಲೆ ಓದಲಾದ ಕ್ರಮ ಸಂಖ್ಯೆ: (3) ರಲ್ಲಿ ಶ್ರೀ ಆರ್.ಈ. ದಶರಥರಾಮ, ಗ್ರೂಪ್ 'ಡಿ' ದೋಭಿ, ನೌಕರರು ದಿನಾಂಕ: 28.10.2000ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ: (4) ರಲ್ಲಿ ನಿರ್ದೇಶನಾಲಯದಿಂದ ದೋಷಾರೋಪಣೆ ಪಟ್ಟಿಯೊಡನೆ ನೋಟೀಸನ್ನು ಹೊರಡಿಸಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸದರಿ ನೌಕರರಿಗೆ ಸೂಚಿಸಲಾಯಿತು. ಮೇಲೆ ಓದಲಾದ ಕ್ರಮ ಸಂಖ್ಯೆ: (5) ರಲ್ಲಿ ಆರೋಪಿತ ಸರ್ಕಾರಿ ನೌಕರರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದನ್ನು ಪರಿಶೀಲಿಸಲಾಗಿ ಸಮಂಜಸವೆಂದು ಕಂಡು ಬಂದ ಕಾರಣ, ಸದರಿ ಆರೋಪಿಯ ಸತ್ಯಾಸತ್ಯತೆಯನ್ನು ಕಂಡು ಕೊಳ್ಳಲು ಇಲಾಖಾ ವಿಚಾರಣೆಯನ್ನು ಕೈಗೊಳ್ಳುವುದಕ್ಕಾಗಿ ಶ್ರೀ ಸಿ.ಎಫ್. ಮೊರಬಾದ್, ಲೇ-ಕಾರ್ಯದರ್ಶಿಗಳು, ಇವರನ್ನು ಕ.ಸಾ.ಸೇ (ಸಿ.ಸಿ.ಎ.) ನಿಯಮಾವಳಿ 1957ರ ನಿಯಮ 11(2) ರನ್ವಯ ವಿಚಾರಣಾಧಿಕಾರಿಯನ್ನಾಗಿ ಶ್ರೀ ವೆಂಕಟಶೆಟ್ಟಿ, ಪ್ರಥಮ ದರ್ಜೆ ಸಹಾಯಕರು, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ಇವರನ್ನು ಇದೇ ನಿಯಮಾವಳಿಯ ನಿಯಮ 11(5) (ಸಿ) ರನ್ವಯ ಮಂಡನಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಆದೇಶ ಹೊರಡಿಸಲಾಯಿತು. ಮೇಲೆ ಓದಲಾದ ಉಲ್ಲೇಖ (7) ರಲ್ಲಿ ವಿಚಾರಣಾಧಿಕಾರಿಗಳು, ಇಲಾಖಾ ವಿಚಾರಣೆಯನ್ನು ಕೈಗೊಂಡು ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ನೌಕರರ ಮೇಲೆ ಹೊರಡಿಸಿರುವ ಆರೋಪಗಳು ಸಾಬೀತಾಗಿವೆಯೆಂದು ವಿಚಾರಣಾ ವರದಿಯನ್ನು ತಿಳಿಸಿರುತ್ತಾರೆ. ಮೇಲೆ ಓದಲಾದ ಉಲ್ಲೇಖ (8) ರಲ್ಲಿ ವಿಚಾರಣಾ ವರದಿಯೊಂದಿಗೆ 2ನೇ ಶೋಕಾಸ್ ನೋಟೀಸನ್ನು ಹೊರಡಿಸಲಾಯಿತು. ಮೆಲೆ ಓದಲಾದ ಉಲ್ಲೇಖ (9) ರಲ್ಲಿ ನಿಗದಿತ ಅವಧಿಯು ಮೀರಿದ ನಂತರವೂ ಲಿಖಿತ ಹೇಳಿಕೆಯನ್ನು ಸಲ್ಲಿಸದಿರುವುದು, ದಿನಾಂಕ: 10.2.2004 ರಲ್ಲಿ ವೈದ್ಯಕೀಯ ಅಧೀಕ್ಷಕರು ಬರೆದ ಪತ್ರದಿಂದ ತಿಳಿದು ಬಂದಿದೆ.

ಶ್ರೀ ಆರ್.ಈ. ದಶರಥರಾಮ, ದೋಭಿ : ಗ್ರೂಪ್ ಡಿ, ನೌಕರರು ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ಇವರು ದಿನಾಂಕ: 1.7.1999 ರಿಂದ 27.10.2000ರ ವರೆಗೆ ಮತ್ತು ಎರಡನೆಯ ಬಾರಿಗೆ ದಿನಾಂಕ: 3.6.2002 ರಿಂದ ಇಲ್ಲಿಯವರೆಗೆ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವುದು ಕೈಗೊಳ್ಳಲಾದ ಇಲಾಖಾ ವಿಚಾರಣೆಯಲ್ಲಿ ಸ್ಪಷ್ಟವಾಗಿ ಸಾಬೀತಾಗಿರುವುದು ಕಂಡು ಬಂದಿರುವ ಕಾರಣ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಸ್‌ಐಎಸ್:ಇಲಾಖಾ ವಿಚಾರಣೆ:45:2000-01, ದಿನಾಂಕ: 12ನೇ ಮೇ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಎನ್. ವಿನಯಕುಮಾರಿ, ನಿರ್ದೇಶಕರು, ಶಿಸ್ತು ಪ್ರಾಧಿಕಾರಿ, ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು, ರಾಜಾಜಿನಗರ, ಬೆಂಗಳೂರು-10 ಆದ ನಾನು ಶ್ರೀ ಆರ್.ಈ. ದಶರಥರಾಮ, ಗ್ರೂಪ್ ಡಿ, ದೋಭಿ, ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರಡಿ ತತ್‌ಕ್ಷಣವೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿರುತ್ತೇವೆ.

ದಿನಾಂಕ: 28.10.2000 ರಿಂದ 2.6.2002ರ ವರೆಗಿನ ಮತ್ತು ಸರ್ಕಾರಿ ಸೇವೆಗೆ ಸೇರಿ ಅನಧಿಕೃತವಾಗಿ ಕರ್ತವ್ಯದಿಂದ ಗೈರು ಹಾಜರಾಗುವ ವರೆಗೆ ಸೇರಿ ಅನಧಿಕೃತವಾಗಿ ಕರ್ತವ್ಯದಿಂದ ಗೈರು ಹಾಜರಾದಂತಹ ಸರ್ಕಾರಿ ಸೇವೆಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಂಡಿದೆ.

ದಿನಾಂಕ: 1.7.1999 ರಿಂದ 27.10.2000ರ ವರೆಗಿನ ಮತ್ತು ದಿನಾಂಕ: 3.6.2002 ರಿಂದ ಇಲ್ಲಿಯವರೆಗೆ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಅವಧಿಯೆಂದೇ ಪರಿಗಣಿಸಿದೆ.

ಪಿ.ಆರ್. 727 ನಿರ್ದೇಶಕರು, ಶಿಸ್ತು ಪ್ರಾಧಿಕಾರಿ ಕಾರಾವಿ ಯೋಜನೆ (ವೈ) ಸೇವೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣದ ಸಂಖ್ಯೆ: ಕಾನಪ:ಪ್ರ:ಎಫ್-ಸಿಆರ್-6:2004, ದಿನಾಂಕ: 26ನೇ ಏಪ್ರಿಲ್ 2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಹಾಲಮ್ಮ ಕೋಂ ಸಿ.ಎಂ. ಬಸಪ್ಪ ಬಿ.ಜಿ. ಹಳ್ಳಿ ಗ್ರಾಮ, ಹೊಳಲ್ಕೆರೆ ತಾಲ್ಲೂಕು. | | 1) ಸಿ.ಎಂ. ಬಸಪ್ಪ ಬಿನ್ ಮರುಳಪ್ಪ, ಟ್ರಾಕ್ಟರ್-ಟ್ರೈಲರ್ ಮಾಲೀಕರು, ಬಿ.ಜಿ. ಹಳ್ಳಿ, ಹೊಳಲ್ಕೆರೆ ತಾಲ್ಲೂಕು. |
| | | 2) ನ್ಯಾಷನಲ್ ಇನ್ ಕಂ. ಲಿ., ಎಂ.ಎಂ. ರೋಡ್, ಚಿತ್ರದುರ್ಗ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಹಾಲಮ್ಮ ಇವರು ತಾವು ಮೃತ ಮರುಳಸಿದ್ದಪ್ಪ ಇವರ ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮರುಳಸಿದ್ದಪ್ಪ ಇವರು ಒಂದನೇ ಪ್ರತಿವಾದಿಗಳಾದ ಸಿ.ಎಂ. ಬಸಪ್ಪ ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ

ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲೆ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 728

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರಕರಣದ ಸಂಖ್ಯೆ: ಕಾಅದಾ:ಕಾನಪ:ಸಿಆರ್-64:2004, ದಿನಾಂಕ: 23ನೇ ಮಾರ್ಚ್ 2004**

**ಅರ್ಜಿದಾರರು**

1) ಶ್ರೀಮತಿ ಕುತೇಜಾಭಿ, ಹಜ್ರೆಸಾಬ್‌ರವರ ಪತ್ನಿ, ಮತ್ತಿತರೆ 5 ಜನರು, 3ನೇ ಮುಖ್ಯ ರಸ್ತೆ, 13ನೇ ಕ್ರಾಸ್, ವಿನೋಬನಗರ, ದಾವಣಗೆರೆ.

**ವಿರುದ್ಧ**

**ಪ್ರತಿವಾದಿಗಳು**

1) ಮೆ: ಕಿಸಾನ್ ಪ್ಲ್ಯಾಂಟ್ ಬಯೋಟೆಕ್ ಪ್ರೈ. ಲಿ., ಪ್ಲಾಟ್ ನಂ.2, ಶ್ರೀನಿವಾಸ ಬಿಲ್ಡಿಂಗ್ ಓಲ್ಡ್ ಇನ್‌ಕಮ್‌ಟ್ಯಾಕ್ಸ್ ಆಫೀಸ್ ರಸ್ತೆ, ವಿದ್ಯಾನಗರ, ಹುಬ್ಬಳ್ಳಿ.
2) ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಡಿವಿಜನಲ್ ಆಫೀಸ್, ಚಾಮರಾಜಪೇಟ್, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ಕುತೇಜಾಭಿ, ಮತ್ತಿತರೆ 5 ಜನರು ಇವರುಗಳಾದ ತಾವು ಮೃತ ಖಲಂದರ್ ಇವರ ತಾಯಿ, ಪತ್ನಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಖಲಂದರ್ ರವರು ಒಂದನೇ ಪ್ರತಿವಾದಿಗಳಾದ ಮೆ: ಕಿಸಾನ್ ಪ್ಲ್ಯಾಂಟ್ ಬಯೋಟೆಕ್ ಪ್ರೈ. ಲಿ., ಇವರ ಸಂಸ್ಥೆಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 729

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರಕರಣದ ಸಂಖ್ಯೆ: ಕಾಅದಾ:ಕಾನಪ:ಸಿಆರ್-104:2004, ದಿನಾಂಕ: 6ನೇ ಮೇ 2004**

**ಅರ್ಜಿದಾರರು**

1) ಶ್ರೀಮತಿ ಗಂಗಾಬಾಯಿ, 37 ವರ್ಷ.
2) ಕೆ. ಶಿವಮೂರ್ತಿ ನಾಯ್ಕ್, 42 ವರ್ಷ.
3) ಸಂತೋಷ 14 ವರ್ಷ, ಜಮ್ಮಾಪುರ, ಅಣಜಿ ಅಂಚೆ, ದಾವಣಗೆರೆ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು**

1) ಎಸ್. ಫೈರೋಜ್ ಬಿನ್ ಅನ್ವರ್ ಸಾಬ್, 4ನೇ ಮುಖ್ಯ ರಸ್ತೆ, 3ನೇ ಕ್ರಾಸ್, ಷುಗರಿ ಫ್ಯಾಕ್ಟರಿ ರಸ್ತೆ, ಹರಿಹರ.
2) ಎಸ್. ಅನ್ವರ್ ಬಿನ್ ಖಮರುದ್ದೀನ್, ಕೆ. ಡಿವಿಜನ್, 1ನೇ ಮೈನ್, 1ನೇ ಕ್ರಾಸ್, ಶಿವಮೊಗ್ಗ ರಸ್ತೆ, ಹರಿಹರ.
3) ಬ್ರ್ಯಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಶಿವಮೊಗ್ಗ ರಸ್ತೆ, ಹರಿಹರ.

**ಪ್ರಕಟಣೆ**

ಶ್ರೀಮತಿ (1) ಗಂಗಾಬಾಯಿ (2) ಕೆ. ಶಿವಮೂರ್ತಿ ನಾಯ್ಕ್ (3) ಸಂತೋಷ ಇವರುಗಳಾದ ತಾವು ಮೃತ ಪಂಪಾಪತಿ ಇವರ ತಾಯಿ, ತಂದೆ ಮತ್ತು ಸಹೋದರರು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪಂಪಾವತಿ ರವರು ಒಂದನೇ ಪ್ರತಿವಾದಿಗಳಾದ ಎಸ್. ಫೈರೋಜ್ ಇವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 730

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರಕರಣದ ಸಂಖ್ಯೆ: ಕಾಅದಾ:ಕಾನಪ:ಸಿಆರ್-111:2004, ದಿನಾಂಕ: 6ನೇ ಮೇ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ರಾಜಪ್ಪ ಬಿನ್ ಲೇಟ್ ಸಿದ್ದಪ್ಪ, 35 ವರ್ಷ
2) ಚಂದ್ರಮ್ಮ ಬಿನ್ ಲೇಟ್ ಸಿದ್ದಪ್ಪ, 32 ವರ್ಷ
3) ಲಕ್ಷ್ಮಮ್ಮ ಬಿನ್ ಲೇಟ್ ಸಿದ್ದಪ್ಪ, 40 ವರ್ಷ
ಮೆದಿಕೆರೆ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ.

1) ಶ್ರೀಮತಿ ಭಾಗ್ಯಮ್ಮ ಕೋಂ ನಾಗಪ್ಪ,
ಮೆದಿಕೆರೆ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ.

**ಪ್ರಕಟಣೆ**

ಶ್ರೀ:ಶ್ರೀಮತಿ (1) ರಾಜಪ್ಪ (2) ಚಂದ್ರಮ್ಮ (3) ಲಕ್ಷ್ಮಮ್ಮ ಇವರುಗಳಾದ ತಾವು ಮೃತ ಹಿರಿಯಮ್ಮ ಇವರ ಮಕ್ಕಳುಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹಿರಿಯಮ್ಮ ರವರು ಒಂದನೇ ಪ್ರತಿವಾದಿಗಳಾದ ಶ್ರೀಮತಿ ಭಾಗ್ಯಮ್ಮ ಕೋಂ ನಾಗಪ್ಪ ಇವರ ಜಮೀನಿನಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 731

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರಕರಣದ ಸಂಖ್ಯೆ: ಕಾಅದಾ:ಕಾನಪ:ಸಿಆರ್-89:2004, ದಿನಾಂಕ: 30ನೇ ಏಪ್ರಿಲ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಖಾರಜ್‌ಸಿಂಗ್ ಬಿನ್ ಅಜಾಯಿಬ್‌ಸಿಂಗ್,
38 ವರ್ಷಗಳು
2) ಸುಕ್‌ಭೀರ್‌ಕೌರ್, ಖಾರಜ್‌ಸಿಂಗ್‌ರವರ ಪತ್ನಿ,
35 ವರ್ಷಗಳು
ಪೆಂಡ್, (ಕಾಳೀಗ್ರಾಮ) ಪಿಕ್‌ವೆಂಡ್ ಅಂಚೆ, ತಾಸಿಲ್
ಪಟ್ಟಿ, ಅಮೃತ್‌ಸರ್ ಜಿಲ್ಲೆ, ಪಂಜಾಬ್.

1) ಶ್ರೀಮತಿ ಜಯಬೆನ್ ಹೆಚ್. ಖೋಡ, ಹೆಚ್. ಖೋಡ
ರವರ ಮಗಳು, ನ್ಯೂಗಿರ್‌ನರ್ ರೋಡ್‌ವೇಸ್, ನಂ.27,
ಜೆ.ಸಿ. ರಸ್ತೆ, ಯುನೈಟೆಡ್ ಬಿಲ್ಡಿಂಗ್, ಬೆಂಗಳೂರು.
2) ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.
ಮಣಿಮಹಲ್, ನಂ.11/21, ಮ್ಯಾಥ್ಯೂ ರಸ್ತೆ, ಅಪೇರ
ಹೌಸ್, ಮುಂಬೈ-400004.

**ಪ್ರಕಟಣೆ**

ಶ್ರೀ:ಶ್ರೀಮತಿ (1) ಖಾರಜ್‌ಸಿಂಗ್ ಮತ್ತು ಸುಕ್‌ಭೀರ್‌ಕೌರ್ ಇವರುಗಳಾದ ತಾವು ಮೃತ ಹೀರಸಿಂಗ್ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹೀರಸಿಂಗ್ ರವರು ಒಂದನೇ ಪ್ರತಿವಾದಿಗಳಾದ ಶ್ರೀಮತಿ ಜಯಬೆನ್ ಹೆಚ್. ಖೋಡ ಇವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 732

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರಕರಣದ ಸಂಖ್ಯೆ: ಕಾಅದಾ:ಕಾನಪ:ಸಿಆರ್-86:2004, ದಿನಾಂಕ: 8ನೇ ಏಪ್ರಿಲ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀಮತಿ ಕೆಂಚಹನುಮಕ್ಕ ಉರುಫ್ ಕೆಂಚಮಕ್ಕ
(ದಿ: ಕರಿಬಸಪ್ಪನವರ ಪತ್ನಿ) ಮತ್ತಿತರೆ 3 ಜನರು,
ಗುಮ್ಮನೂರು, ದಾವಣಗೆರೆ ತಾಲ್ಲೂಕು

1) ಕೆ. ವಿರೂಪಾಕ್ಷಪ್ಪ ಬಿನ್ ಸಂಕಪ್ಪ,
ಚಿಕ್ಕನಹಳ್ಳಿ ಗ್ರಾಮ, ದಾವಣಗೆರೆ ತಾಲ್ಲೂಕು.
2) ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ
ಇನ್ಸೂರೆನ್ಸ್ ಕಂ. ಲಿ., ಪಿ.ಜೆ. ಎಕ್ಸ್‌ಟೆನ್‌ಷನ್, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ (1) ಕೆಂಚಹನುಮಕ್ಕ (2) ಅಜ್ಜಯ್ಯ (3) ನಾಗಮ್ಮ (4) ಕೆಂಚವ್ವ ಇವರುಗಳಾದ ತಾವು ಮೃತ ಕರಿಬಸಪ್ಪ ಇವರ ಪತ್ನಿ, ಮಕ್ಕಳು ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕರಿಬಸಪ್ಪ ರವರು ಒಂದನೇ ಪ್ರತಿವಾದಿಗಳಾದ ಕೆ. ವಿರೂಪಾಕ್ಷಪ್ಪ ಇವರ ಟ್ರ್ಯಾಕ್ಟರ್ ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 733

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕರಣದ ಸಂಖ್ಯೆ: ಕಾಅದಾ:ಕಾನಪ:ಸಿಆರ್-76:2004, ದಿನಾಂಕ: 8ನೇ ಏಪ್ರಿಲ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಅರ್ಜಿದಾರರು:
1) ಶ್ರೀಮತಿ ಲಕ್ಷ್ಮವ್ವ (ಬೆಂಕಳಪ್ಪರವರ ಪತ್ನಿ) ಮತ್ತಿತರೆ 3 ಜನರು, ಜಿ. ಬೇವಿನಹಳ್ಳಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ.

ಪ್ರತಿವಾದಿಗಳು:
1) ಕೆ.ಎಂ. ಮರುಳಸಿದ್ದಯ್ಯ ಬಿನ್ ದಿ: ಬಸಯ್ಯ, ಕಾಳೇಶ್ವರ ದೇವಸ್ಥಾನದ ಹಿಂಭಾಗ, ಚಿತ್ತವಾಡಗಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ.
2) ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಸ್ಟೇಷನ್ ರಸ್ತೆ, ಹೊಸಪೇಟೆ.

**ಪ್ರಕಟಣೆ**

ಶ್ರೀಮತಿ (1) ಲಕ್ಷ್ಮವ್ವ (2) ಮರಿಯಮ್ಮ (3) ನಿಂಗಪ್ಪ (4) ಹುಲಿಗೆಮ್ಮ ಇವರುಗಳಾದ ತಾವು ಮೃತ ಭರ್ಮಪ್ಪ ಇವರ ತಾಯಿ, ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಭರ್ಮಪ್ಪ ರವರು ಒಂದನೇ ಪ್ರತಿವಾದಿಗಳಾದ ಕೆ.ಎಂ. ಮರುಳಸಿದ್ದಯ್ಯ ಇವರ ಟ್ರ್ಯಾಕ್ಟರ್ ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 734

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-9:2004**

**ಅರ್ಜಿದಾರರು:** 1) ಶ್ರೀಮತಿ ಎಸ್.ಎಂ. ಲಲಿತ ಕೋಂ ಎಸ್.ಪಿ. ರಾಜೇಶ, ಸುಮಾರು 25 ವರ್ಷ.

2) ಹರ್ಷಿತ ಬಿನ್ ಎಸ್.ಪಿ. ರಾಜೇಶ, 1 ವರ್ಷ, ವಾಸ: ಕೇರಾಫ್ ಎಸ್.ಬಿ. ಮಹೇಶ, ಸಾಣೇನಹಳ್ಳಿ ಕೊಪ್ಪಲು, ಕುಂಬೇನಹಳ್ಳಿ ಅಂಚೆ, ಶ್ರವಣಬೆಳಗೊಳ ಹೋಬಳಿ, ಚನ್ನರಾಯಪಟ್ಟಣ ತಾಲ್ಲೂಕು.

**ಪ್ರತಿವಾದಿಗಳು:** 1) ಶ್ರೀ ಹೆಚ್.ಬಿ. ನಾರಾಯಣ ಉರುಫ್ ಸತ್ಯನಾರಾಯಣ ಬಿನ್ ಹೆಚ್.ಎನ್. ಬಸವೇಗೌಡ, ಎಲೆಕ್ಟ್ರಿಕ್ ಕಂಟ್ರಾಕ್ಟರ್), ಹಿರಿಸಾವೆ, ಚನ್ನರಾಯಪಟ್ಟಣ ತಾಲ್ಲೂಕು.

2) ಅನಿಲ್ ಉ: ಅನಿಲ್‌ಕುಮಾರ್, ಬಿನ್ ಗುಂಡಣ್ಣ, ಎಲೆಕ್ಟ್ರಿಕ್ ಕಂಟ್ರಾಕ್ಟರ್, ಶ್ರೀ ಮಠದ ಬೀದಿ, ಶ್ರವಣಬೆಳಗೊಳ, ಚನ್ನರಾಯಪಟ್ಟಣ ತಾಲ್ಲೂಕು.

3) ಎಂ.ಯು.ಎಸ್, ಎಸ್.ಸೆಕ್ಷನ್ ಆಫೀಸರ್, (ಕೆ.ಪಿ.ಟಿ.ಸಿ.ಎಲ್.), ಹಿರಿಸಾವೆ,

4) ಎಕ್ಸಿಕ್ಯುಟಿವ್ ಇಂಜಿನಿಯರ್, ಕೆ.ಪಿ.ಟಿ.ಸಿ.ಎಲ್. (ಕೆಇಬಿ) ಚನ್ನರಾಯಪಟ್ಟಣ ಟೌನ್.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಎಸ್.ಪಿ. ರಾಜೇಶ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 20.4.2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 739 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**KARNATAKA ELECTRICITY REGULATORY COMMISSION**

**6th & 7th Floor, Mahalaxmi Chambers, No.9/2, M.G. Road, Bangalore-560 001**

**NOTIFICATION No. J/02/1/, dated: 18th May 2004**

In accordance with Sub Clause (5) of Regulation 3 of Karnataka Electricity Regulatory Commission (Advisory Committee) Regulations, 2000, the following members of the Commission Advisory Committee have retired with immediate effect since they have completed their tenure.

1) Shri J. Crasta,
2) Shri V. Narayana Gowda
3) Shri S. Mune Gowda
4) Shri K.N. Jayalingappa.

By Order and in the name of Karnataka Electricity Regulatory Commission

**H. SHASHIDHAR**

P.D. 37 Secretary.

**ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು-560 009**

**ಅಧಿಸೂಚನೆ ಸಂಖ್ಯೆ: ಎನ್‌ಆರ್‌ಸಿ(2):2:2004-05, ದಿನಾಂಕ: 14ನೇ ಮೇ 2004**

**ವಿಷಯ:** 2004-05ನೇ ಸಾಲಿನ ಶುಶ್ರೂಷಾ ತರಬೇತಿ ಕೋರ್ಸಿನ ಪ್ರವೇಶಕ್ಕಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

1. ಈ ಕೆಳಗೆ ನಮೂದಿಸಿರುವ (ಅನುಬಂಧ-II ರಲ್ಲಿ) 11 ಸರ್ಕಾರಿ ಶುಶ್ರೂಷಾ ಶಾಲೆಗಳಿಗೆ 2004-05ನೇ ಸಾಲಿನ ಶುಶ್ರೂಷಾ ತರಬೇತಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಗಳನ್ನು ಸಂಬಂಧಿಸಿದ ಅಂದರೆ, ನೀವು ಅರ್ಜಿ ಹಾಕಲಿಚ್ಛಿಸುವ ಸಂಸ್ಥೆಯ ಅಧೀಕ್ಷಕರು : ಪ್ರಾಂಶುಪಾಲರುಗಳಿಂದ ದಿನಾಂಕ: 28.5.2004 ತರುವಾಯ ರೂ.25/-ನ್ನು ನಗದಾಗಿ ಸಂದಾಯ ಮಾಡಿ ನಿಯಮಿತ ಅರ್ಜಿಯನ್ನು ಪಡೆದು ನೀವು ಆಯ್ಕೆ ಬಯಸುವ ಶುಶ್ರೂಷಾ ಶಾಲೆಗೆ ನೇರವಾಗಿ ಸಲ್ಲಿಸತಕ್ಕದ್ದು.

⇒ ಅಂಚೆ ಮೂಲಕ ಅರ್ಜಿಯನ್ನು ಪಡೆಯ ಬಯಸುವವರು ರೂ.25/- ರ ಕ್ರಾಸ್ ಮಾಡಿದ ಪೋಸ್ಟಲ್ ಆರ್ಡರ್ ಜೊತೆಗೆ ಸ್ವವಿಳಾಸವಿರುವ 30X12ರ ಲಕೋಟೆಗೆ (ಈಗಿರುವ ಅಂಚೆ ದರದಂತೆ) ಅಂಚೆ ಚೀಟಿ ಹಚ್ಚಿ ನೀವು ಆಯ್ಕೆ ಬಯಸುವ ಸಂಸ್ಥೆಯ ಅಧೀಕ್ಷಕರುಗಳಿಂದ ಅರ್ಜಿಯನ್ನು ಪಡೆಯಬಹುದು.

⇒ **ಅಂಚೆ ಆದೇಶಗಳನ್ನು ಹಾಗೂ ಅರ್ಜಿಗಳನ್ನು ಯಾವುದೇ ಕಾರಣದಿಂದ ಈ ನಿರ್ದೇಶನಾಲಯಕ್ಕೆ ಕಳುಹಿಸಬಾರದು. ಒಂದು ವೇಳೆ ಕಳುಹಿಸಿದಲ್ಲಿ ಅಂಥಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 44 ಎಂಪಿಎಸ್ 2003(3) ದಿನಾಂಕ: 3.7.2003ರ ಪ್ರಕಾರ ಅಭ್ಯರ್ಥಿಗಳು ಶುಶ್ರೂಷಾ ತರಬೇತಿಗೆ ಅರ್ಜಿ ಸಲ್ಲಿಸಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು:

⇒ ಅಭ್ಯರ್ಥಿಯ ವಯಸ್ಸು ಅರ್ಜಿಸಲ್ಲಿಸಲು ಕೊನೆಯ ದಿನಾಂಕದಂದು 17 ವರ್ಷಗಳು ತುಂಬಿರಬೇಕು. ಹಾಗೂ 35 ವರ್ಷಗಳನ್ನು ಮೀರಿರಬಾರದು.

⇒ ವಿದ್ಯಾರ್ಹತೆ : ಅಭ್ಯರ್ಥಿಯು ಪದವಿಪೂರ್ವ ಶಿಕ್ಷಣ (ದ್ವಿತೀಯ ಪಿಯುಸಿ) ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

⇒ ಅಭ್ಯರ್ಥಿಗಳು 1ನೇ ತರಗತಿಯಿಂದ 12ನೇ ತರಗತಿಯವರೆಗೆ ಕನಿಷ್ಠ 7 ವರ್ಷಗಳು ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರಬೇಕು ಹಾಗೂ 10ನೇ ತರಗತಿಯಿಂದ 12ನೇ ತರಗತಿಯವರೆಗೆ ಕಡ್ಡಾಯವಾಗಿ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರಬೇಕು. ಅದಕ್ಕೆ ಸಂಬಂಧಿಸಿದ ವ್ಯಾಸಂಗ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.

⇒ ಅಭ್ಯರ್ಥಿಗಳ ತಂದೆ ತಾಯಿಗಳು ಸಹ ಕನಿಷ್ಟ 7 ವರ್ಷಗಳು ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರಬೇಕು.

**ತರಬೇತಿಯ ಅವಧಿ:** ಶುಶ್ರೂಷಾ ತರಬೇತಿಯ ಅವಧಿಯು ಮೂರು ವರ್ಷಗಳಾಗಿದ್ದು, ಸರ್ಕಾರಿ ನಿಯಮಗಳ ಪ್ರಕಾರ, ಸರ್ಕಾರಿ ಶುಶ್ರೂಷಾ ಶಾಲೆಗಳಲ್ಲಿ ವಿದ್ಯಾರ್ಥಿಗಳು ಶಿಷ್ಯವೇತನ ಪಡೆಯಲು ಅರ್ಹರಾಗಿರುತ್ತಾರೆ.

3. ತರಬೇತಿಗೆ ಗರ್ಭಿಣಿ ಅಭ್ಯರ್ಥಿಗಳಿಗೆ ಪ್ರವೇಶಾವಕಾಶವನ್ನು ನಿರಾಕರಿಸಲಾಗುವುದು.

4. ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ಇಲಾಖಾ ಅಧಿಕಾರಿಗಳ ಮುಖಾಂತರ (ಹುದ್ದೆಗೆ ನೇಮಕಾತಿ ಮಾಡುವ ಅಧಿಕಾರವುಳ್ಳವರಿಂದ) ಅರ್ಜಿಗಳನ್ನು ಸಲ್ಲಿಸಬೇಕು.

⇒ ಅರ್ಜಿಯನ್ನು ಹಾಕಲಿಚ್ಛಿಸುವ ಇಲಾಖಾ ಅಭ್ಯರ್ಥಿಗಳು (ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ 48 ವರ್ಷಗಳು ಮೀರಿರಬಾರದು.

⇒ ಅರ್ಜಿದಾರರ ಹಿಂದಿನ ಹುದ್ದೆಗೆ ಬಾಂಡ್ ಅವಧಿ ಮುಗಿದು 5 ವರ್ಷಕ್ಕೆ ಕಡಿಮೆಯಿಲ್ಲದೇ ಸರ್ಕಾರಿ ಸೇವೆ ಸಲ್ಲಿಸಿರಬೇಕು. ಮತ್ತು ಖಾಯಂ ಪೂರ್ವಾವಧಿ ಘೋಷಣೆಯಾಗಿರಬೇಕು.

⇒ ಅರ್ಜಿದಾರರು ತಮ್ಮ ವಿರುದ್ಧ ಯಾವುದೇ ರೀತಿಯ ಇಲಾಖಾ ವಿಚಾರಣೆ ಬಾಕಿ ಇಲ್ಲವೆಂದು ತಮ್ಮ ಮೇಲಾಧಿಕಾರಿಗಳಿಂದ ದೃಢೀಕರಣ ಪಡೆದು ಅರ್ಜಿಯೊಂದಿಗೆ ಲಗತ್ತಿಸುವುದು.

⇒ ಈ ಮೇಲಿನ ಎಲ್ಲಾ ಮಾಹಿತಿಯೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಇಲಾಖಾ ಮುಖ್ಯಸ್ಥರ ಮುಖಾಂತರ ಈ ನಿರ್ದೇಶನಾಲಯಕ್ಕೆ ನಿಗದಿತ ದಿನಾಂಕದೊಳಗೆ ತಲುಪುವಂತೆ ಕಳುಹಿಸತಕ್ಕದ್ದು.

5. ಪ್ರತಿಯೊಂದು ಶುಶ್ರೂಷಾ ಶಾಲೆಗಳಲ್ಲಿರುವ ಒಟ್ಟು ತರಬೇತಿ ಸ್ಥಾನಗಳ ಪೈಕಿ ಶೇಕಡಾ 5 ರಷ್ಟು ಪುರುಷ ಅಭ್ಯರ್ಥಿಗಳಿಗೆ ಆಯಾ ವರ್ಗಕ್ಕೆ ಅನುಸಾರವಾಗಿ 19 ಸ್ಥಾನಗಳನ್ನು ಮೀಸಲಿರಿಸಲಾಗಿದೆ.

⇒ ಮಾಜಿ ಸೈನಿಕರ ಮಕ್ಕಳಿಗೆ ಶೇಕಡಾ 1 ರಂತೆ ನಾಲ್ಕು ಸ್ಥಾನಗಳನ್ನು ಮೀಸಲಿರಿಸಲಾಗಿದೆ.

⇒ ದ್ವಿತೀಯ ಪಿ.ಯು.ಸಿ. ಯಲ್ಲಿ ಉತ್ತೀರ್ಣರಾದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ಒಟ್ಟು ತರಬೇತಿ ಸ್ಥಾನಗಳಲ್ಲಿ ಶೇಕಡಾ 5 ರಂತೆ 19 ಸ್ಥಾನಗಳನ್ನು ಮೀಸಲಿರಿಸಲಾಗಿದೆ.

6. ಹೊರನಾಡ ಕನ್ನಡಿಗರು / ಗಡಿನಾಡ ಕನ್ನಡಿಗರು ಅರ್ಜಿ ಸಲ್ಲಿಸಬಹುದಾಗಿದೆ. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಸಾಮಾನ್ಯ ಕನ್ನಡ ಓದಲು ಬರೆಯಲು ಬರಬೇಕು. ತರಬೇತಿ ಆಯ್ಕೆಗೆ ಮುನ್ನ ಕನ್ನಡ ಪರೀಕ್ಷೆ ನಡೆಸಲಾಗುವುದು.

7. ಮಹಿಳಾ ಅಭ್ಯರ್ಥಿಗಳಿಗೆ ಸರ್ಕಾರದ 11 ನರ್ಸಿಂಗ್ ಶಾಲೆಗಳಲ್ಲಿ ಆಯಾ ವರ್ಗಕ್ಕೆ ತಕ್ಕಂತೆ ಎಲ್ಲಾ ಪ್ರವರ್ಗಕ್ಕೆ ಸರ್ಕಾರಿ ಆದೇಶದಾನುಸಾರ ಮೀಸಲಿಡಲಾಗಿದೆ. (ಅನುಬಂಧ-II ರಲ್ಲಿ ವಿವರಿಸಿದೆ)

8. ಅರ್ಜಿ ಹಾಕಲಿಚ್ಛಿಸುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಿಯುಸಿ, ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಜನ್ಮದಿನಾಂಕದ ದೃಢೀಕರಣ ಪತ್ರ (ಟಿ.ಸಿ.) ಇತ್ತೀಚಿನ ದೇಹಧಾರ್ಢ್ಯತೆ ಪ್ರಮಾಣ ಪತ್ರ, ಜಾತಿ ಹಾಗೂ ಆದಾಯ ಪ್ರಮಾಣ ಪತ್ರ (ತಹಶೀಲ್ದಾರರಿಂದ ಪ್ರಮಾಣೀಕರಿಸಿರಬೇಕು) ನಡತೆ ಪ್ರಮಾಣ ಪತ್ರ, ಇತ್ತೀಚಿನ ಭಾವಚಿತ್ರವನ್ನು ಅರ್ಜಿಯೊಂದಿಗೆ ಕಡ್ಡಾಯವಾಗಿ ಲಗತ್ತಿಸಿರಬೇಕು.

⇒ ಅರ್ಜಿಯನ್ನು ಸ್ವಂತ ಬರವಣಿಗೆಯಿಂದ ಕನ್ನಡ ಭಾಷೆಯಲ್ಲಿ ಭರ್ತಿ ಮಾಡಬೇಕು.

⇒ ಎಲ್ಲಾ ರೀತಿಯಿಂದ ಕ್ರಮವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಪ್ರಮಾಣ ಪತ್ರಗಳ ನಕಲುಗಳೊಂದಿಗೆ ಮತ್ತು ರೂ.25/- ರ ಕ್ರಾಸ್ ಮಾಡಿದ ಪೋಸ್ಟಲ್ ಆರ್ಡರ್‌ನೊಂದಿಗೆ (ಪರಿಶಿಷ್ಟಜಾತಿ / ಪರಿಶಿಷ್ಟ ಪಂಗಡದವರಿಗೆ ರೂ.5/- ಮಾತ್ರ) ಅರ್ಜಿ ಪಡೆದ ಶುಶ್ರೂಷಾ ಶಾಲೆಗಳ ವಿಳಾಸಕ್ಕೆ ನಿಗದಿಪಡಿಸಿದ ದಿನಾಂಕದೊಳಗೆ ಅರ್ಜಿಗಳು ತಲುಪುವಂತೆ ಕಳುಹಿಸತಕ್ಕದ್ದು.

⇒ ಪೋಸ್ಟಲ್ ಆರ್ಡರ್‌ಗಳನ್ನು ನೀವು ಆಯ್ಕೆ ಬಯಸುವ ಸಂಸ್ಥೆಯ ಅಧೀಕ್ಷಕರ ಹೆಸರಿನಲ್ಲಿ ಪಡೆಯುವುದು.

8. ಅರ್ಜಿ ಫಾರಂಗಳನ್ನೊಳಗೊಂಡ ಲಕೋಟೆಯ ಮೇಲೆ **2004ನೇ ಸಾಲಿಗೆ ಶುಶ್ರೂಷಾ ತರಬೇತಿ ಕೋರ್ಸಿನ ಪ್ರವೇಶಕ್ಕಾಗಿ ಅರ್ಜಿ** ಎಂಬುದಾಗಿ ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.

9. ಇಲಾಖಾ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಮೇಲಾಧಿಕಾರಿಗಳ ಮೂಲಕ ದಿನಾಂಕ: 17.6.2004 ರೊಳಗಾಗಿ ಈ ನಿರ್ದೇಶನಾಲಯಕ್ಕೆ ತಲುಪುವಂತೆ ಕ್ರಮ ವಹಿಸತಕ್ಕದ್ದು.

⇒ ಮಾಜಿ ಸೈನಿಕರ ಮಕ್ಕಳ ಮೀಸಲಿರಿಸಿರುವ ಸ್ಥಾನಕ್ಕೆ ಸಲ್ಲಿಸಿದ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳು ದಿನಾಂಕ: 17.6.2004ರ ಒಳಗಾಗಿ ಈ ನಿರ್ದೇಶನಾಲಯಕ್ಕೆ ಕಳುಹಿಸತಕ್ಕದ್ದು.

10. ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆದಾಗ ಅವರುಗಳಿಗೆ ಸ್ಥಳ ಮತ್ತು ದಿನಾಂಕವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅವರವರ ಸ್ವಂತ ರಜೆ ಮತ್ತು ಖರ್ಚಿನಲ್ಲಿ ಹಾಜರಾಗತಕ್ಕದ್ದು. ಪಿಯುಸಿ / ಎಸ್‌ಎಸ್‌ಎಲ್‌ಸಿ, ಜನ್ಮ ದಿನಾಂಕದ ದೃಢೀಕರಣ ಪತ್ರ (ಟಿ.ಸಿ) ಇತ್ತೀಚಿನ ದೇಹಧಾರ್ಢ್ಯತೆ ಪ್ರಮಾಣ ಪತ್ರ, ನಡತೆ ಪ್ರಮಾಣ ಪತ್ರ, ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನದ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

11. ತರಬೇತಿಯನ್ನು ಪೂರ್ಣಗೊಳಿಸಿದ ಎಲ್ಲಾ ಅಭ್ಯರ್ಥಿಗಳಿಗೆ ಸರ್ಕಾರದಲ್ಲಿ ಸೇವೆ ಸಲ್ಲಿಸಲು ನೇಮಕ ಮಾಡಿಕೊಳ್ಳುವ ಖಾತರಿ ನೀಡುವುದಿಲ್ಲ. ತರಬೇತಿ ಅವಧಿಯಲ್ಲಿ ಶಿಷ್ಯವೇತನವನ್ನು ಪಡೆಯುವುದರಿಂದ ಇಬ್ಬರು ಖಾಯಂ ಸರ್ಕಾರಿ ನೌಕರರ ಜಾಮೀನಿನಿಂದ ಕೂಡಿದ ಬಂದಪತ್ರ ಸಲ್ಲಿಸಬೇಕು.

12. ಕೊನೆಯ ದಿನಾಂಕದ ನಂತರ ಬರುವ ಅಥವಾ ಅಪೂರ್ಣವಾದ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು. ಈ ಸಂಬಂಧದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ. ತರಬೇತಿಗೆ ಸಂಬಂಧಪಟ್ಟ ಹೆಚ್ಚಿನ ವಿವರಗಳನ್ನು ಶುಶ್ರೂಷಾ ಶಾಲೆಯ ಮುಖ್ಯಸ್ಥರಿಂದ ಎಲ್ಲಾ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆಯಬಹುದು.

⇒ ಶುಶ್ರೂಷಾ ತರಬೇತಿ ಶಾಲೆಗಳಲ್ಲಿ ಅರ್ಜಿಗಳನ್ನು ಪಡೆಯಲು ಕೊನೆಯ ದಿನಾಂಕ: 11.6.2004ರ ಸಂಜೆ 4.00 ಘಂಟೆಯವರೆಗೆ.

⇒ ಭರ್ತಿ ಮಾಡಿದ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳಲ್ಲಿ ಸಲ್ಲಿಸಲು ಕೊನೆಯ ದಿನಾಂಕ: 17.6.2004ರ ಸಂಜೆ 4.00 ಘಂಟೆಯವರೆಗೆ.

13. ಈ ಮೂಲಕ ಎಲ್ಲಾ ವಿವರಗಳೊಂದಿಗೆ ಭರ್ತಿ ಮಾಡಿದ ಅರ್ಜಿಯನ್ನು ನಿಗದಿತ ದಿನಾಂಕದೊಳಗೆ ನೀವು ಸೇರಲಿಚ್ಛಿಸುವ ಶುಶ್ರೂಷಾ ಶಾಲೆಗೆ ಕಳುಹಿಸತಕ್ಕದ್ದು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು.

## ಅನುಬಂಧ - II

**ಸರ್ಕಾರಿ ಆದೇಶ ಸಂಖ್ಯೆ: ಸಕಇ:222:ಬಿಸಿಎ:94, ದಿನಾಂಕ: 20.9.94 ಮತ್ತು ಸಂಖ್ಯೆ: ಸಕಇ:225:ಬಿಸಿಎ:2000, ದಿನಾಂಕ: 30.3.2002ರ ಆದೇಶಕ್ಕನುಸಾರವಾಗಿ ಅನುಬಂಧ- II ನ್ನು ತಯಾರಿಸಲಾಗಿದೆ.**

| ಕ್ರ. ಸಂ. | ತರಬೇತಿ ಶಾಲೆಗಳ ಹೆಸರು | ಪ್ರವೇಶ ಮಿತಿ | ಮಾಜಿ ಸೈನಿಕರ ಮಕ್ಕಳ ಮೀಸಲು ಸ್ಥಾನ | ಪುರುಷ ಅಭ್ಯರ್ಥಿಗಳ ಮೀಸಲು ಸ್ಥಾನ | ವರ್ಗಕ್ಕೆ ಅನುಸಾರ ವಾಗಿ (ಪುರುಷ) ಅಭ್ಯರ್ಥಿಗಳಿಗೆ | ಇಲಾಖಾ ಅಭ್ಯರ್ಥಿಗಳ ಮೀಸಲು ಸ್ಥಾನಗಳು (ಎಎನ್‌ಎಂ) | ಮಹಿಳಾ ಅಭ್ಯರ್ಥಿಗಳ ಮೀಸಲು ಸ್ಥಾನಗಳು | ಆಯಾ ವರ್ಗಕ್ಕನುಸಾರವಾಗಿ | | | | | | | |
|---|---|---|---|---|---|---|---|---|---|---|---|---|---|---|---|
| | | | | | | | | ಜಿಎಂ | ವರ್ಗ- 1 | 2ಎ | 2ಬಿ | 3ಎ | 3ಬಿ | ಎಸ್‌ಸಿ | ಎಸ್‌ಟಿ |
| 1) | ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆ, ಬೆಂಗಳೂರು | 40 | 1 | 2 | I : ಜಿಎಂ | 2 | 35 | 19 | 1 | 5 | 1 | 1 | 2 | 5 | 1 |
| 2) | ವಿಕ್ಟೋರಿಯ ಆಸ್ಪತ್ರೆ, ಬೆಂಗಳೂರು. | 45 | 1 | 2 | 3ಎ : ಜಿಎಂ | 2 | 40 | 20 | 2 | 6 | 1 | 2 | 2 | 6 | 1 |
| 3) | ಕೆ.ಆರ್. ಆಸ್ಪತ್ರೆ, ಮೈಸೂರು | 45 | 1 | 2 | 3ಬಿ : ಜಿಎಂ | 2 | 40 | 20 | 2 | 6 | 1 | 2 | 2 | 6 | 1 |
| 4) | ಕೆಎಂಸಿ ಆಸ್ಪತ್ರೆ, ಹುಬ್ಬಳ್ಳಿ. | 45 | 1 | 2 | ಎಸ್‌ಸಿ:ಜಿಎಂ | 2 | 40 | 20 | 2 | 6 | 1 | 2 | 2 | 6 | 1 |
| 5) | ಜಿಲ್ಲಾ ವೆನ್‌ಲಾಕ್ ಆಸ್ಪತ್ರೆ, ಮಂಗಳೂರು. | 35 | - | 2 | ಎಸ್‌ಟಿ:ಜಿಎಂ | 2 | 31 | 15 | 1 | 5 | 1 | 1 | 2 | 5 | 1 |
| 6) | ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ. | 35 | - | 2 | 2ಎ:ಜಿಎಂ | 2 | 31 | 15 | 1 | 5 | 1 | 1 | 2 | 5 | 1 |
| 7) | ಜಿಲ್ಲಾ ಆಸ್ಪತ್ರೆ, ಬೆಳಗಾಂ. | 35 | - | 2 | ಎಸ್‌ಸಿ:ಜಿಎಂ | 2 | 31 | 15 | 1 | 5 | 1 | 1 | 2 | 5 | 1 |
| 8) | ಜಿಲ್ಲಾ ಆಸ್ಪತ್ರೆ, ಬಳ್ಳಾರಿ. | 30 | - | 2 | 2ಎ:ಜಿಎಂ | 2 | 26 | 13 | 1 | 4 | 1 | 1 | 1 | 4 | 1 |
| 9) | ಜಿಲ್ಲಾ ಆಸ್ಪತ್ರೆ, ಬಿಜಾಪುರ. | 30 | - | 1 | 2ಬಿ | 1 | 28 | 14 | 1 | 4 | 1 | 1 | 2 | 4 | 1 |
| 10) | ಸಿಜಿ ಆಸ್ಪತ್ರೆ, ದಾವಣಗೆರೆ | 30 | - | 1 | ಜಿಎಂ | 1 | 28 | 14 | 1 | 4 | 1 | 1 | 2 | 4 | 1 |
| 11) | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ. | 20 | - | 1 | ಜಿಎಂ | 1 | 18 | 9 | 1 | 2 | 1 | 1 | 1 | 2 | 1 |
| | | 390 | 4 | 19 | | 19 | | | | | | | | | |

**ಸೂಚನೆ:** ಪುರುಷ ಅಭ್ಯರ್ಥಿಗಳಿಗೆ - ಶೇಕಡಾ 5
ಇಲಾಖಾ ಅಭ್ಯರ್ಥಿಗಳಿಗೆ - ಶೇಕಡಾ 5
ಮಾಜಿ ಸೈನಿಕರ ಮಕ್ಕಳಿಗೆ - ಶೇಕಡಾ 1

ವೈದ್ಯಕೀಯ ಶಿಕ್ಷಣ ನಿರ್ದೇಶಕರು.

ಪಿ.ಆರ್. 738